ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರ ಪುಸ್ತಕಮಾಲೆ—೭೯

# ಅಥರ್ವ ವೇದ

ಸಿ. ಜಿ. ಪುರುಷೋತ್ತಮ, ಎಂ.ಎ.,




ಮೈಸೂರು

ಮೈಸೂರು ವಿಶ್ವವಿದ್ಯಾನಿಲಯ

೧೯೬೮

# ಮೈಸೂರು ವಿಶ್ವವಿದ್ಯಾನಿಲಯ
## ಪ್ರಚಾರ ಪುಸ್ತಕಮಾಲೆ

೧. ಖಗೋಳಶಾಸ್ತ್ರ ಪ್ರವೇಶ
—ಡಾ॥ ಸಿ. ಎನ್. ಶ್ರೀನಿವಾಸ ಅಯ್ಯಂಗಾರ್
೨. ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್
೩. ತೆರಿಗೆ—ಬಿ. ಆರ್. ಸುಬ್ಬರಾವ್
೪. ನವರತ್ನಗಳು—ಎಚ್. ಸುಬ್ಬಾಜೋಯಿಸ್
೫. ನಮ್ಮ ಹಳ್ಳಿಗಳು—ಜಿ. ಎಸ್. ಕೃಷ್ಣಮೂರ್ತಿ
೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೮. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೯. ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್
೧೦. ಪಂಪ—ತೀ. ನಂ. ಶ್ರೀಕಂಠಯ್ಯ
೧೧. ಪ್ರಾಣಿಜೀವನ—ಎ. ನಾರಾಯಣರಾವ್
೧೨. ಕನಸುಗಳು—ಡಾ॥ ಎನ್. ಎಸ್. ನಾರಾಯಣಶಾಸ್ತ್ರೀ
೧೩. ಮದುವೆ— ನಾ. ಕಸ್ತೂರಿ
೧೪. * ನಮ್ಮ ಆರ್ಥಿಕದೃಷ್ಟಿ—ಎಸ್. ಗೋಪಾಲಸ್ವಾಮಿ
೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್
೧೬. ಬೆಳಕು—ಟಿ. ಎಸ್. ಸುಬ್ಬರಾಯ
೧೭. ಕರ್ನಾಟಕ ಕಾದಂಬರಿ—ವಿ. ಸೀತಾರಾಮಯ್ಯ
೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ–ಪಿ. ಜಿ. ಸತ್ಯಗಿರಿನಾಥನ್
೨೦. ಕಣ್ಣು ಮತ್ತು ಅದರ ರಕ್ಷಣೆ—ಡಿ. ಶಾಮಣ್ಣ
೨೧. ಸಾರ್ವಜನಿಕ ವೆಚ್ಚ—ಡಾ॥ ಎಂ. ಎಚ್. ಗೋಪಾಲ್
೨೨. ಶಿಶುವಿಹಾರಗಳು—ಸಿ. ರಂಗಾಚಾರ್
೨೩. ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರಿ
೨೪. ವಿಡಂಬನ—ಎಸ್. ವಿ. ರಂಗಣ್ಣ
೨೫. ಎಲ್ಲೋರ ಮತ್ತು ಅಜಂತ—ಡಾ॥ ಎಂ. ಎಚ್. ಕೃಷ್ಣ

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರ ಪುಸ್ತಕಮಾಲೆ—೭೯

# ಅಥರ್ವ ವೇದ

ಸಿ. ಜಿ. ಪುರುಷೋತ್ತಮ, ಎಂ.ಎ.,






ಮೈಸೂರು

ಮೈಸೂರು ವಿಶ್ವವಿದ್ಯಾನಿಲಯ

೧೯೫೮

# ಮುನ್ನುಡಿ

ಈ ಪ್ರಚಾರ ಪುಸ್ತಕಮಾಲೆ ಪ್ರಾರಂಭವಾಗಿ ಇಂದಿಗೆ ಸುಮಾರು ಇಪ್ಪತ್ತೈದು ವರ್ಷಗಳಾಗಿವೆ. ಈ ಅವಧಿಯಲ್ಲಿ ೭೯ ಪುಸ್ತಿಕೆಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ. ಕಾಲಾವಧಿಯನ್ನು ಗಮನಿಸಿದರೆ ಈಗ ಹೊರಬಿದ್ದಿರುವ ಕಿರು ಹೊತ್ತಗೆಗಳ ಸಂಖ್ಯೆ ಈಗಿರುವುದಕ್ಕಿಂತಲೂ ದ್ವಿಗುಣವೊ ತ್ರಿಗುಣವೊ ಆಗಿರಬೇಕಾಗಿತ್ತೆಂದು ಹೇಳಬಹುದು. ಆದರೂ ಅವುಗಳ ಗುಣವನ್ನೂ ಅವು ಮಾರಾಟವಾಗುತ್ತಿರುವ ವೇಗವನ್ನೂ ಗಮನಿಸಿದರೆ ಈ ಮಾಲೆಯ ಉಪಯುಕ್ತತೆ ಮತ್ತು ಜನಪ್ರಿಯತೆ ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ಪುಸ್ತಿಕೆಯೂ ಮೂರು ನಾಲ್ಕು ಸಾರಿ ಮುದ್ರಿತವಾಗಿದೆ. ದಿನೇ ದಿನೇ ಈ ಮಾಲೆಯ ಬಗೆಗೆ ಜನರ ವಿಶ್ವಾಸಾದರಗಳು ಅಧಿಕವಾಗುತ್ತಿವೆ. "ಈ ತಿಂಗಳು ಏನಾದರೂ ಹೊಸ ಪುಸ್ತಿಕೆ ಬಂದಿದೆಯೆ ? ಮುಗಿದು ಹೋಗಿರುವ ಪುಸ್ತಿಕೆಗಳು ಅಚ್ಚಾಗಿವೆಯೆ?" ಎಂದು ಮೇಲಿಂದ ಮೇಲೆ ಜನ ಕೇಳುತ್ತಿರುತ್ತಾರೆ. ಇದು ನಿಜವಾಗಿಯೂ ಸಂತೋಷದ ಸಂಗತಿ ; ನಾಡಿನ ಪ್ರಗತಿಯ ಒಂದು ಚಿಹ್ನೆ.

ನಾಡಿನಲ್ಲಿ ದಿನೇ ದಿನೇ ವಿದ್ಯಾವಂತರ ಮತ್ತು ಅಕ್ಷರಸ್ಥರ ಸಂಖ್ಯೆ ಬೆಳೆಯುತ್ತಿದೆ. ಕೇವಲ ಸಾಕ್ಷರತೆಯಿಂದ ಮಹತ್ತಾದ ಪ್ರಯೋಜನವೇನೂ ಲಭಿಸದು. ಸಾಕ್ಷರತೆ ಬೇರೊಂದು ಸಿದ್ಧಿಗಾಗಿ ಸಾಧನವೇ ಹೊರತು ಅದೇ ಪರಮ ಗುರಿಯಲ್ಲ; ಜ್ಞಾನ ಸಂಪಾದನೆಯೇ ಅದರ ಪರಮ ಗುರಿ. ಈ ಗುರಿಯ ಸಾಧನೆಗಾಗಿ ಸಕಲ ಅನುಕೂಲತೆಗಳನ್ನು ಕಲ್ಪಿಸುವುದು ವಿಶ್ವವಿದ್ಯಾನಿಲಯದಂಥ ಸಂಸ್ಥೆಗಳ ಆದ್ಯ ಕರ್ತವ್ಯ. ಈ ಮೂಲಕ ವಿಶ್ವ

ವಿದ್ಯಾನಿಲಯದ ಜ್ಞಾನವಾಹಿನಿ ನಾಡಿನ ಮೂಲೆಮೂಲೆಗೆಲ್ಲ ಹರಿದು, ಸಮಷ್ಟಿಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ.

ಈ ಮಾಲೆಯಿಂದ ಸಾಮಾನ್ಯ ಜನರಲ್ಲಿ ಜ್ಞಾನಪ್ರಸಾರ ಕಾರ್ಯ ತಕ್ಕಮಟ್ಟಿಗೆ ಯಶಸ್ವಿಯಾಗಿ ನಡೆದಿರುವಂತೆಯೆ ಕನ್ನಡ ದಲ್ಲಿ ವಿಜ್ಞಾನ ಸಂಬಂಧವಾದ ವಿಷಯಗಳನ್ನು ಸುಲಭವಾಗಿ ಸರಳವಾಗಿ ಹೇಳಬಹುದು, ಮತ್ತು ಕನ್ನಡ ವೈಜ್ಞಾನಿಕ ಭಾಷೆ ಯಾಗಬಲ್ಲುದು ಎಂಬ ಅಂಶ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಈ ಪುಸ್ತಿಕೆಗಳ ಪಟ್ಟಿಯನ್ನೊಮ್ಮೆ ಓದಿದರೆ ಸಂದೇಹವಾದಿಗಳ ಶಂಕೆ ಸಂಪೂರ್ಣವಾಗಿ ನಿವಾರಣೆಗೊಂಡು ಧೈರ್ಯ ಮೂಡದಿರದು. ಇವುಗಳಲ್ಲಿ ೫೫ ಪುಸ್ತಿಕೆಗಳು ಭೌತವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿ ವಿಜ್ಞಾನ, ಸಮಾಜ ವಿಜ್ಞಾನ, ವೈದ್ಯ ವಿಜ್ಞಾನ, ಗಣಿತ ವಿಜ್ಞಾನ, ಇತಿಹಾಸ ಮೊದಲಾದುವುಗಳಿಗೆ ಸಂಬಂಧಿಸಿದವು. ಉಳಿದ ೨೪ ಪುಸ್ತಿಕೆಗಳು ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದುವು. ಇವುಗಳ ಗ್ರಂಥಕರ್ತರು ಪ್ರಮುಖವಾಗಿ ವಿಶ್ವವಿದ್ಯಾನಿಲಯದಲ್ಲಿ ಹತ್ತಿಪ್ಪತ್ತು ವರ್ಷಗಳ ಕಾಲ ಪಾಠ ಹೇಳಿ ನುರಿತಿರುವ ಘನ ವಿದ್ವಾಂಸರು. ಬಹಳ ಹಿಂದೆಯೇ ವೈಜ್ಞಾನಿಕ ಗ್ರಂಥಗಳ ರಚನೆಗೆ ಕೈಹಾಕಿ ಕನ್ನಡ ವೈಜ್ಞಾನಿಕ ಭಾಷೆಯಾಗುವ ಸಾಮರ್ಥ್ಯವನ್ನು ಪಡೆದಿದೆ, ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣಮಾಧ್ಯಮವಾಗುವ ಶಕ್ತಿ ಯನ್ನು ಪಡೆದಿದೆ ಎಂದು ತೋರಿಸಿಕೊಟ್ಟಿದ್ದಾರೆ. ಅವರೆಲ್ಲ ಅಭಿನಂದನಾರ್ಹರು.

ಈ ಮಾಲೆಯ ಕಾರ್ಯ ತ್ವರಿತಗೊಂಡು, ವಿಸ್ತಾರಗೊಂಡು ಪುಸ್ತಕಗಳ ಸಂಖ್ಯೆ ದಿನೇ ದಿನೇ ಬೆಳೆಯಬೇಕೆಂದೂ, ಇದರಿಂದ ಸಾಮಾನ್ಯ ಜನತೆ ಸಂಪೂರ್ಣ ಪ್ರಯೋಜನ ಪಡೆದು ಸಮಷ್ಟಿ

ಪ್ರಜ್ಞೆ ಸರ್ವತೋಮುಖವಾಗಿ ವಿಕಾಸಗೊಳ್ಳಬೇಕೆಂಬುದೂ ವಿಶ್ವವಿದ್ಯಾನಿಲಯದ ಆಸೆ. ಕನ್ನಡನಾಡು ಒಂದುಗೂಡಿರುವ ಈ ಶಕಮುಹೂರ್ತದಲ್ಲಿ ಕನ್ನಡನುಡಿ ಆಡಳಿತದ ಭಾಷೆಯಾಗಿ, ವ್ಯವಹಾರದ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ, ಜನತೆಯ ಸಂಸ್ಕೃತಿವಿಕಾಸಸಾಧನದ ಭಾಷೆಯಾಗಿ ಮುಂದುವರಿಯುವುದರಲ್ಲಿ ಸಂದೇಹವಿಲ್ಲ. ವಿಶ್ವವಿದ್ಯಾನಿಲಯದ ಈ ಸೇವೆಯನ್ನು ಕರ್ನಾಟಕ ಸಂಪೂರ್ಣವಾಗಿ ತನ್ನ ಮೇಲ್ಮೆಗೂ ಏಳ್ಗೆಗೂ ಬಳಸಿಕೊಳ್ಳುತ್ತದೆಂದು ನಾವು ಹಾರೈಸುತ್ತೇವೆ.

ಮೈಸೂರು
೨೫—೧೧—೫೮

ಕೆ. ವಿ. ಪುಟ್ಟಪ್ಪ
ವೈಸ್-ಛಾನ್ಸಲರ್.

# ಎರಡು ಮಾತು

ನಮ್ಮ ವಿಶ್ವವಿದ್ಯಾನಿಲಯದ ಪ್ರಕಟಣೆ ಮತ್ತು ಪ್ರಚಾರೋಪನ್ಯಾಸ ಶಾಖೆಯ ಕಾರ್ಯದರ್ಶಿಗಳವರು ಚುಂಚನಕಟ್ಟೆಯ ಗುರುಕುಲ ಪ್ರೌಢಶಾಲೆ ಮತ್ತು ಕನಕಪುರದ ರೂರಲ್ ಕಾಲೇಜು ಈ ಸ್ಥಳಗಳಲ್ಲಿ ಅಥರ್ವ ವೇದವನ್ನು ಕುರಿತು ಮಾತನಾಡಲು ದಯೆಯಿಟ್ಟು ಅವಕಾಶ ಕಲ್ಪಿಸಿಕೊಟ್ಟರು. ಮೇಲ್ಕಂಡ ಸ್ಥಳಗಳಲ್ಲಿ ಮಾಡಿದ ಭಾಷಣಗಳ ಆಧಾರದ ಮೇಲೆ ಈ ಪುಸ್ತಿಕೆಯನ್ನು ಸಿದ್ಧಗೊಳಿಸಲಾಗಿದೆ. ಋಗ್ವೇದವನ್ನು ಬಿಟ್ಟರೆ, ಅತಿ ದೊಡ್ಡ ವೇದವೂ, ಒಂದು ದೃಷ್ಟಿಯಿಂದ ಋಗ್ವೇದಕ್ಕಿಂತಲೂ ಮುಖ್ಯವೂ ಆದ ಅಥರ್ವ ವೇದವನ್ನು ಕುರಿತಾದ ಒಂದು ಸಮಗ್ರ ಚಿತ್ರವನ್ನು ಈ ಕಿರು ಹೊತ್ತಿಗೆಯ ಮಿತಿಗೊಳಪಡಿಸಿ ಅಳವಡಿಸುವುದು ಕಷ್ಟ ಸಾಧ್ಯ.

ಆದರೂ "ಜರ್ಮನಿಯವರು ಅಥರ್ವ ವೇದವನ್ನು ಕದ್ದು ಹೊತ್ತುಕೊಂಡು ಹೋಗಿ–ಹೊಡೆದುಕೊಂಡುಹೋಗಿ–ವಿಮಾನವನ್ನು ಕಂಡು ಹಿಡಿದರು" ಎಂಬ ಮಾತಿನ ಹುರುಳನ್ನು ಹುಡುಕಲು ಹೊರಟ ಈ ವಿದ್ಯಾರ್ಥಿ, ಮೋಡಿ ಹಾಕುವುದನ್ನು, ಯಂತ್ರ, ಮಂತ್ರ, ಕುತಂತ್ರ (?) ಮಾಡುವುದನ್ನು ಕಲಿತುಕೊಳ್ಳಬೇಕೆಂದು ಹೊರಟ ಈ ಜಾದೂ ಪ್ರಿಯ ಕೊನೆಗೆ ಅಥರ್ವ ವೇದವೆಂದರೇನೆಂಬುದರ ಒಂದು ಸ್ಥೂಲ ಪರಿಚಯವನ್ನು ವಾಚಕರಿಗೆ ಮಾಡಿಕೊಡಲು ಅನುಕೂಲ ಕಲ್ಪಿಸಿ, ಈ ಕಿರುಹೊತ್ತಿಗೆಯ ರೂಪದಲ್ಲಿ ಇದನ್ನು ಅಚ್ಚುಹಾಕಿಸಿ ಪ್ರಕಟಿಸುತ್ತಿರುವ ನಮ್ಮ ವಿಶ್ವವಿದ್ಯಾನಿಲಯದ ಮಾನ್ಯ ಉಪಕುಲ

ಪತಿಗಳು, ಮತ್ತು ಪ್ರಕಟಣೆ ಮತ್ತು ಪ್ರಚಾರೋಪನ್ಯಾಸ ಶಾಖೆಯ ಕಾರ್ಯದರ್ಶಿಗಳು ಶ್ರೀ ತ. ಸು. ಶಾಮರಾಯರು ಇವರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಈ ಪುಸ್ತಿಕೆಯನ್ನು ಕೇವಲ ನಾಲ್ಕೈದು ದಿನಗಳೊಳಗೆ ಇಷ್ಟು ಅಂದವಾಗಿ ಅಚ್ಚುಹಾಕಿಕೊಟ್ಟ ವಿಶ್ವವಿದ್ಯಾನಿಲಯದ ಅಚ್ಚುಕೂಟದ ಮುಖ್ಯಾಧಿಕಾರಿಗಳಾದ ಶ್ರೀ ದೇ. ಜವರೇಗೌಡ ರವರಿಗೂ, ಅಧಿಕಾರಿವರ್ಗದವರಿಗೂ ಮತ್ತು ಕಾರ್ಯಕರ್ತರಿಗೂ ನಾನು ಕೃತಜ್ಞ.

ತಾ|| ೧೨-೧೨-೩೮ ಇತಿ,

ಮಹಾರಾಜಾ ಕಾಲೇಜು, ಸಿ. ಜಿ. ಪುರುಷೋತ್ತಮ.

ಮೈಸೂರು.

# ವಿಷಯಾನುಕ್ರಮಣಿಕೆ.

— : ಓಂ : —

## ಶ್ರುತಿಯೆನ್ನದೆನ್ನಲ್ಲೆ ನೆಲೆಗೊಳ್ಳಲಿ.

( ಅ. ವೇ. ಕಾಂಡ ೧. ಸೂಕ್ತ ೧. )

ವಿಶ್ವ ರೂಪವನೆತ್ತಿ, ವಿಶ್ವವನ್ನುರೆ ಸುತ್ತಿ,
ಬರುತಿರ್ಪ ಮೂರೇಳು ದೇವತೆಗಳ
ಬಲ ಪರಾಕ್ರಮಗಳನು ಇಂದೆನ್ನ ದೇಹದಲಿ
ಭರಿಸಿ ವಾಚಸ್ಪತಿಯು ಕೃಪೆದೋರಲಿ ! ||೧||

ದೇವ, ವಾಚಸ್ಪತಿಯೆ, ಬಾ ಮತ್ತೆ ದಿವ್ಯವಹ
ತವ ಮನಸ್ ಶಕ್ತಿಯನು ನಿನ್ನೊಡನೆ ತಾ !
ವಸುಪತಿಯೆ, ನೆಲೆಸು ನೀನಿಲ್ಲಿಲ್ಲೆ, ಓ ದೇವ,
ಶ್ರುತಿಯೆನ್ನದೆನ್ನಲ್ಲೆ ನೆಲೆಗೊಳ್ಳಲಿ ! ||೨||

ಇಲ್ಲೆ—ಈ ತಾಣದಲೆ—ನಿನ್ನ ಕರುಣಾಹಸ್ತ
ವೆರಡಿಲ್ಲಿ ಪಸರಿಸಲಿ ; ಬಿಲ್ಲ ತುದಿಯಂ
ಹಗ್ಗವದು ತಾಂ ಬಂಧಿಪಂತೆ ; ವಾಚಸ್ಪತಿಯೆ,
ಶ್ರುತಿಯೆನ್ನದೆನ್ನಲ್ಲೆ ನೆಲೆಗೊಳ್ಳಲಿ ! ||೩||

ಉಪಹೂತದೇವವಾಚಸ್ಪತಿಯು ಇನ್ನು
ನಮ್ಮನಾಹ್ವಾನಿಸಲಿ ದೇವನವನು ;
ಶ್ರುತಿಯೊಡನೆ ಎಮಗೆ ಸಂಗಮವಕ್ಕೆ ತಪ್ಪದೊಲು ;
ಶ್ರುತಿಯೊಡನೆ ಬಾಂಧವ್ಯ ಕಡಿಯದಿರಲಿ ! ||೪||

# ಅಥರ್ವ ವೇದ

## ೧. ಪೀಠಿಕೆ

**ವೇದವೆಂದರೇನು ? :**—'ವೇದ' ವೆಂದರೆ 'ಜ್ಞಾನ'–'ಅರಿವು'-ಎಂದರ್ಥ. 'ವಿದ-ಜ್ಞಾನೇ' ಎಂಬ ಧಾತುವಿನಿಂದ 'ವೇದ' ಶಬ್ದ ಉತ್ಪತ್ತಿಯಾಗಿದೆ. ಮಧ್ಯ ಏಷ್ಯಾದಿಂದ ಎಲ್ಲಿಂದಲೋ ಬಂದವರೆಂದು ಹೇಳಲಾದ ಪುರಾತನ ಆರ್ಯರು ಸಿಂಧೂ ಮತ್ತು ಅದರ ಉಪನದಿಗಳ ಫಲವತ್ತಾದ ಬಯಲಿನಲ್ಲಿ ನೆಲೆಸಿದರು. ಆ ವೇಳೆಗಾಗಲೇ ಆ ಆರ್ಯರು 'ಬಹು ಮಟ್ಟಿನ ಜ್ಞಾನವುಳ್ಳವರಾಗಿದ್ದರು'. ಪ್ರಕೃತಿಯ ನಾನಾ ವ್ಯಾಪಾರ ಗಳನ್ನು ಅರಿತು ಅವುಗಳ ಹಿಂದೆ ಪ್ರಚೋದಕ ಶಕ್ತಿಯೊಂದಿರ ಬೇಕೆಂದು ಭಾವಿಸಿಕೊಂಡು ಇಂದ್ರ, ಮಿತ್ರ, ನಾಸತ್ಯ ಮುಂತಾದ ದೈವೀಶಕ್ತಿಗಳನ್ನು–ದೇವತೆಗಳನ್ನು–ಪ್ರಾರ್ಥನಾ ರೂಪದಲ್ಲಿ ಪ್ರಶಂಸಿಸುವಷ್ಟು ಮುಂದುವರಿದಿದ್ದರು. ಅವರಿ ಮೊದಲಿನ ವಾಸಸ್ಥಾನಕ್ಕಿಂತಲೂ ಫಲವತ್ತಾದ ಪಂಚನದಿಗಳ ಬಯಲಿನಲ್ಲಿ ಬಹುಕಾಲ ಸುಖವಾಗಿ ನಿಂತರು. ಎಲ್ಲೋ ಕೆಲವು ವೇಳೆ ಇಲ್ಲಿಯ ಮೂಲನಿವಾಸಿಗಳೊಡನೆ-ದಸ್ಯುಗಳೊಡನೆ-ಕಾದಬೇಕಾದ ಸಂದರ್ಭಗಳನ್ನುಳಿದರೆ ಅವರು ಶಾಂತ ಹಾಗೂ ತೃಪ್ತಜೀವನವನ್ನು ನಡೆಸುತ್ತಿದ್ದರು.

ಇಂತಹ ಪ್ರಶಾಂತ, ಸುಖಮಯ ಸನ್ನಿವೇಶದಲ್ಲಿ ಪ್ರಕೃತಿಯ ನಾನಾ ವ್ಯಾಪಾರಗಳನ್ನು ಅವರು ವೀಕ್ಷಿಸಿದರು. ಪ್ರಜ್ವಲಿಸುವ ಅಗ್ನಿ, ತೇಜೋಮಯನಾದ ಸೂರ್ಯ, ಸಿಡಿಲು, ಗುಡುಗು, ಮಿಂಚುಗಳ ಆರ್ಭಟ, ಸಸ್ಯ ಸಮೃದ್ಧಿ ಅಂತೆಯೇ

ನವ್ಯಶಾದ್ವಲಮಯೀ ಪೃಥಿವಿ, ಮನೋಹಾರಿಣಿ ಶಾಂತಿದಾತೆ ಉಷೋದೇವಿ, ತೊಳಗುವ ತಾರೆಗಳ ನಗಗಳನ್ನು ತೊಟ್ಟ ನಿಶಾರಾಣಿ ಮುಂತಾದ ಪ್ರಕೃತಿಯ ನಾನಾ ವ್ಯಾಪಾರಗಳನ್ನು ನೋಡಿ ಅವರಲ್ಲಿ ಭಯ, ಭಕ್ತಿ, ಆಶ್ಚರ್ಯ ಮುಂತಾದ ಭಾವನೆಗಳು ಉತ್ತೇಜಿತವಾಗಿ ಸ್ತೋತ್ರರೂಪದಿಂದ ಹೊರಹೊಮ್ಮಿದುವು. ಈ ರೀತಿ ತಾವು ಭಾವಿಸಿದ ಭಾವನೆಗಳನ್ನೂ, ಯೋಚಿಸಿದ ಯೋಚನೆಗಳನ್ನೂ, ತಿಳಿದ ತಿಳಿವನ್ನೂ ಒಟ್ಟುಗೂಡಿಸಿದರು. ಈ ರೀತಿಯ ತಿಳಿವಿನ ಸಮುದಾಯವೇ 'ವೇದ'.

**ವೇದಗಳು ನಾಲ್ಕು:** ಕಾಲಕ್ರಮದಲ್ಲಿ ಈ ಜ್ಞಾನರಾಶಿ ಸ್ತುತಿ ರೂಪವಾಗಿ, ಪ್ರಾರ್ಥನಾನಿಯಮಗಳ ರೂಪವಾಗಿ, ಗಾನರೂಪವಾಗಿ, ಇಂದ್ರಜಾಲರೂಪವಾಗಿ ನಾಲ್ಮಡಿಯಾಯಿತು. ಸ್ತುತಿರೂಪ ಜ್ಞಾನರಾಶಿ 'ಋಗ್ವೇದ'ವಾಗಿಯೂ, ಪ್ರಾರ್ಥನಾ ನಿಯಮರೂಪ ಜ್ಞಾನರಾಶಿ 'ಯಜುರ್ವೇದ'ವಾಗಿಯೂ, ಗಾನರೂಪ ಜ್ಞಾನರಾಶಿ 'ಸಾಮವೇದ'ವಾಗಿಯೂ ಮೊದಲು ಬಳೆದುವು. ಮಾಟ ಮಂತ್ರಗಳ-ಐಂದ್ರಜಾಲಿಕ-ಜ್ಞಾನರಾಶಿ 'ಅಥರ್ವ ವೇದ' ವಾಗಿ 'ವೇದ' ಸ್ಥಾನ ಪಡೆಯಲು ಬಹುಕಾಲ ಬೇಕಾಯಿತು.

**'ತ್ರಯೀ' ವಿದ್ಯೆ:** ಮೇಲೆ ಹೇಳಿದ ನಾಲ್ಕು ವೇದಗಳಲ್ಲಿ ಮೊದಲಿನ ಮೂರು ವೇದಗಳಾದ ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳನ್ನು ಒಂದು ಗುಂಪಾಗಿಯೂ ಅಥರ್ವವೇದವೊಂದನ್ನೇ ಬೇರೆಯಾಗಿಯೂ ವಿಭಾಗಿಸಬಹುದು. ಋಗ್ವೇದ, ಯಜುರ್ವೇದ ಮತ್ತು ಸಾಮವೇದ ಇವು ಮಾತ್ರ ವೇದಗಳೆಂದೂ 'ತ್ರಯೀ ವಿದ್ಯಾ' (ಮುಮ್ಮಡಿಯ ಜ್ಞಾನ) ಎಂದೂ ಬಹುಕಾಲದವರೆಗೆ ಪರಿಗಣಿಸಲ್ಪಟ್ಟಿದ್ದುವು. ಈ

ಮೂರೂ ವೇದಗಳ ಮುಖ್ಯ ಗುರಿ ಯಜ್ಞ ಯಾಗಗಳು, ತನ್ಮೂಲಕ ಪರಲೋಕ ಪ್ರಾಪ್ತಿ.

**ಅಥರ್ವ ವೇದ 'ವೇದ' ಸ್ಥಾನ ಪಡೆಯದಿರಲು ಕಾರಣ :** ಅಥರ್ವ ವೇದವನ್ನು ಒಂದು ವೇದವೆಂದು ಪರಿಗಣಿಸಲು ಬಹಳಕಾಲ ಬೇಕಾಯಿತೆಂದು ಹಿಂದೆ ಹೇಳಿದೆಯಷ್ಟೆ. ಇದಕ್ಕೆ ಅದರಲ್ಲಿ ಕಂಡು ಬರುವ ವಿಷಯಗಳೇ ಕಾರಣವೆನ್ನಬಹುದು. 'ತ್ರಿವೇದಿ' ಗಳಿರಲಿ. ಕಡೆಗೆ ವೈದಿಕ ಮತಕ್ಕೆ ಸುಧಾರಣಾ ರೂಪದಿಂದ ಉದ್ಭವಿಸಿದ ಜೈನ, ಬೌದ್ಧ ಮತಗಳ ಸಂನ್ಯಾಸಿಗಳೂ ಕೂಡ ಅಥರ್ವ ವೇದಕ್ಕೆ ಪ್ರಾಶಸ್ತ್ಯ ಕೊಟ್ಟಿಲ್ಲ. 'ಕೃತ್ಯಾ' (ಮಾಟ) ಮತ್ತು 'ಯಾತು' (ಜಾದೂ) ಮಾಡುವುದು ಪಾತಕಿಗಳ ವೃತ್ತಿಯೆಂದು ಸ್ಮೃತಿ ಗ್ರಂಥಗಳು ಸಾರಿದುವು; "ಮಾಟ ಮಾಡಿದವನ ಮನೆ ಹಾಳು" ಎಂದು ನಾವು ಗಾದೆ ಹೇಳುವಂತೆ. ಹೀಗಾಗಿ 'ಕೃತ್ಯಾ' ಮತ್ತು 'ಯಾತು' ಗಳಿಗೆ ಪ್ರಸಿದ್ಧವಾದ ಅಥರ್ವವೇದ ಮತ್ತು ಆಥರ್ವಣಿಕರು ಬಹು ನಿಕೃಷ್ಟರಾಗಿ, ಶ್ರುತಿಗಳ-ಶ್ರೋತ್ರಿಯರ ಶ್ರೇಣಿಗೆ ಸೇರಲು ಶತಮಾನಗಳು ಬೇಕಾದುವು.

ಅಥರ್ವವೇದ ಸಾಮಾನ್ಯ ಜನರ ವೇದ. ಅದರ ಗುರಿ ಐಹಿಕಾಮುಷ್ಮಿಕವೆರಡೂ. 'ತ್ರಯೀವಿದ್ಯೆ'ಯ ಗುರಿ ಕೇವಲ ಆಮುಷ್ಮಿಕ. ಅಥರ್ವವೇದವು ಐಹಿಕ ಸುಖಕ್ಕೆ-ನೂರ್ಕಾಲ ಬದುಕುವ ಕಡೆಗೆ-(ದೀರ್ಘಾಯುತ್ವಾಯ ಶತ ಶಾರದಾಯ) ಗಮನ ಕೊಟ್ಟಿತು. ತುಂಬು ಬದುಕನ್ನು ಬದುಕಿ ಜರಾಮೃತ್ಯುವನ್ನು ಹೊಂದಿ ಆಮೇಲೆ ಯಮಲೋಕವನ್ನು-ಅತ್ಯುಚ್ಚಸ್ವರ್ಗವನ್ನು-ಪಡೆಯಬೇಕೆಂದು ಸಾರಿತು. ಮೊದಲ ಮೂರು ವೇದಗಳಲ್ಲಿ ಪ್ರೋಕ್ತವಾಗಿದ್ದ ಅತಿ ಜಟಿಲವೂ, ಅತೀವ ಧನವ್ಯಯ

ದಿಂದ ಮಾತ್ರ ಸಾಧ್ಯವೂ ಆಗಿದ್ದ ಮಹಾಮಹಾ ಯಜ್ಞಗಳನ್ನು ಬಹು ಸುಲಭಗೊಳಿಸಿ 'ಸವ'ಗಳನ್ನು ರೂಢಿಗೆ ತಂದಿತು. ಕೇವಲ ಅತಿಥಿಯೋರ್ವನಿಗೆ ನೀಡಬೇಕಾದ ಉಪಚಾರ ನೀಡಿದರೆ ಸಾಕು ಅಗ್ನಿಷ್ಟೋಮ, ಅಶ್ವಮೇಧಾದಿ ಯಾಗಗಳ ಫಲ ದೊರೆಯುತ್ತದೆಂದು ಆಥರ್ವಣಿಕ ದ್ರಷ್ಟಾರರು ಸಾರಿದರು.

ಈ ಯಾವ ಮೂರು ಲೋಕಗಳಿವೆಯೊ
ಅವುಗಳಲಿ ಭೂಲೋಕ ಶ್ರೇಷ್ಠತಮವೈ.

ಇಮಾ ಯಾಸ್ತಿಸ್ರಃ ಪೃಥಿವೀಸ್ತಾಸಾಂ ಹ ಭೂಮಿರುತ್ತಮಾ।
೬. ೨೧. ೧.

ಎಂದು ಘೋಷಿಸಿದರು. ಕಡೆಗೆ 'ವ್ರಾತ್ಯ'ರೆಂಬ ಜನರನ್ನು ಕೆಲವು ವಿಧಿಗಳ ಮೂಲಕ ಆರ್ಯರನ್ನಾಗಿ ಪರಿವರ್ತಿಸುವಷ್ಟು ಮುಂದೆ ಹೋದರು. ಆರ್ಯ ಸಮಾಜಕ್ಕೆ ಸೇರದ ಅನಾಗರಿಕರಾದ ಅಸುರರಿಂದ ಕೂಡ ಕೆಲವು ಔಷಧಿಗಳ ಪ್ರಯೋಗಗಳನ್ನು ಅರಿತು ತಮ್ಮ ವೈದ್ಯಕೀಯ ಜ್ಞಾನವನ್ನು ಬೆಳೆಸಿಕೊಂಡರು. ಈ ರೀತಿ ಮೊದಲಿನ ಮೂರು ವೇದಗಳಲ್ಲಿ ಕಂಡು ಬಾರದ ಸುಧಾರಣಾ ಬುದ್ಧಿಯೂ ಕೂಡ ಅಥರ್ವ ವೇದವನ್ನು ಬಹುಕಾಲ ಒಂದು ವೇದವೆಂದು ಪರಿಗಣಿಸಲು ಅವಕಾಶ ವೀಯಲಿಲ್ಲವೆಂದು ಭಾವಿಸಬಹುದು.

**ನಾಲ್ಕನೆಯ ವೇದದ ಹೆಸರುಗಳು :** ಕೊನೆಯ ವೇದಕ್ಕೆ ಅಥರ್ವವೇದ, ಅಥರ್ವಣವೇದ, ಅಥರ್ವಾಂಗಿರಸ, ಆಂಗಿರಸ, ಭೃಗ್ವಂಗಿರಸ, ಭೃಗುವಿಸ್ತರ, ಬ್ರಹ್ಮವೇದ, ಭೈಷಜ್ಯವೇದ, ಕ್ಷತ್ರವೇದ ಎಂಬುದಾಗಿ ಹಲವು ಹೆಸರುಗಳು ರೂಢಿಯಲ್ಲಿವೆ.

'ಅಥರ್ವನ್' ಎಂದರೆ 'ಅಗ್ನಿಪೂಜಕ'. ಇರಾನಿಗಳ ಪುರಾತನ 'ಅವೆಸ್ತನ್' ಭಾಷೆಯಲ್ಲಿ 'ಅಥರ್ವನ್' ಎಂದರೆ 'ಅಗ್ನಿ

ಪುರೋಹಿತ' ಎಂದರ್ಥ. ಬಹುಶಃ ಆಥರ್ವಣರೇ ಮೊಟ್ಟ ಮೊದಲು ಅಗ್ನಿಯನ್ನು ಕಂಡುಹಿಡಿದವರಾಗಿರಬೇಕು. 'ಅಥ ರ್ವನ್' ಎಂದು ಒಂದು ಋಷಿ ಕುಲವೂ ಇದೆ. ಹೀಗೆಯೇ ಆಂಗಿ ರಸ, ಭೃಗು, ಬ್ರಹ್ಮನ್ ಎಂಬ ಪದಗಳೂ ಋಷಿಕುಲವಾಚಕ ಗಳಾಗಿವೆ. ಈ ಋಷಿಕುಲಗಳೇ ನಾಲ್ಕನೆಯ ವೇದದಲ್ಲಿ ಬಹು ಭಾಗ ಸೂಕ್ತಗಳಿಗೆ 'ಮಂತ್ರ ದ್ರಷ್ಟಾರ'ರಾಗಿದ್ದಾರೆ. ಆಥರ್ವಣ ಋಷಿಗಳಿಂದ ಸುಮಾರು ೧೭೫ ಸೂಕ್ತಗಳೂ, ಆಂಗಿರಸರಿಂದ ೧೫ ಸೂಕ್ತಗಳೂ, ಆಥರ್ವಾಂಗಿರಸರಿಂದ ೧೭ ಸೂಕ್ತಗಳೂ, ಬ್ರಹ್ಮನ್ ಋಷಿಗಳಿಂದ ೧೦೦ ಸೂಕ್ತಗಳೂ ಸಂಕಲಿತವಾಗಿವೆ. ಆದ್ದರಿಂದ ನಾಲ್ಕನೆಯ ವೇದಕ್ಕೆ ಅಥರ್ವಣವೇದ (ಅಥರ್ವ ಎಂಬುದು ಸಂಕುಚಿತಾರ್ಥದಲ್ಲಿ), ಆಂಗಿರಸವೇದ, ಅಥರ್ವಾಂಗಿ ರಸ, ಭೃಗ್ವಂಗಿರಸ, ಭೃಗು ವಿಸ್ತರ, ಬ್ರಹ್ಮವೇದ ಎಂಬುದಾಗಿ ಹೆಸರುಗಳು ಬಂದಿವೆಯೆಂದು ತಿಳಿಯಬಹುದು.

**ಬಹ್ಮವೇದ :** 'ಬ್ರಹ್ಮವೇದ' ಎಂಬುದಕ್ಕೆ ಮತ್ತೊಂದು ರೀತಿಯ ವಿವರಣೆಯನ್ನು ಕೊಡಬಹುದು. ಯಜ್ಞದಲ್ಲಿ ನಾಲ್ಕು ಜನ ಪುರೋಹಿತರಿರುತ್ತಾರೆ. ಇವರಿಗೆ ಋತ್ವಿಕ್ಕುಗಳೆಂದೂ ಹೆಸರು. ಋಗ್ವೇದದ ಮಂತ್ರಗಳನ್ನು ಪಠಿಸಿ ದೇವತೆಗಳನ್ನು ಸ್ತುತಿಸಿ ಆಹ್ವಾನಿಸುವ ಋತ್ವಿಕ್ಕಿಗೆ ಹೋತೃವೆಂದೂ, ಆ ದೇವತೆ ಗಳಿಗೆ ವಿಧಿಪೂರ್ವಕವಾಗಿ ಅಗ್ನಿಯಲ್ಲಿ ಹವಿಸ್ಸನ್ನು ಅರ್ಪಿಸುವ ವನಿಗೆ ಅಧ್ವರ್ಯುವೆಂದೂ, ಋಕ್ಕುಗಳನ್ನು (ಋಗ್ವೇದದ ಮಂತ್ರಭಾಗಗಳು) ಸ್ವರವತ್ತಾಗಿ ಇಂಪಾಗಿ ಗಾಯನ ಮಾಡುವ ಪುರೋಹಿತನಿಗೆ 'ಉದ್ಗಾತೃ'ವೆಂದೂ, ಈ ಮೂವರಿಗೂ ಮಾರ್ಗದರ್ಶನ ಮಾಡುತ್ತಾ ಅರಿತೋ ಅರಿಯದೆಯೋ ಆಗ ಬಹುದಾದ ನ್ಯೂನತೆಗಳು, ವಿಘ್ನಗಳು ಮುಂತಾದುವನ್ನು ಪರಿ

ಹರಿಸಿ ಯಜ್ಞವನ್ನು ಯಶಸ್ವಿಯಾಗಿ ಫಲಪ್ರದವಾಗಿ ಪೂರೈ ಸುವ ಹೊಣೆಯನ್ನು ಹೊತ್ತ ಪುರೋಹಿತನಿಗೆ 'ಬ್ರಹ್ಮನ್' ಎಂದೂ ಹೆಸರು. ಈ ನಾಲ್ಕು ಜನ ಋತ್ವಿಕ್ಕುಗಳಿಗೆ ಕ್ರಮ ವಾಗಿ ಒಂದೊಂದು ವೇದ ಭಾಗದಲ್ಲಿ ಪರಿಪೂರ್ಣಜ್ಞಾನವಿರ ಬೇಕು. ಈ ದೃಷ್ಟಿಯಿಂದ ಋಗ್ವೇದವನ್ನು 'ಹೋತೃ' (ಆಹ್ವಾ ನಿಸುವನ) ವೇದವೆಂದೂ, ಯಜುರ್ವೇದವನ್ನು 'ಅಧ್ವರ್ಯು' (ಹವಿಸ್ಸನ್ನು ದಾನಮಾಡುವವನ) ವೇದವೆಂದೂ, ಸಾಮವೇದ ವನ್ನು 'ಉದ್ಗಾತೃ'(ಗಾನಮಾಡುವವನ)ವೇದವೆಂದೂ, ಅಥರ್ವ ವೇದವನ್ನು 'ಬ್ರಹ್ಮ' (ಮೇಲ್ವಿಚಾರಕನ) ವೇದವೆಂದೂ ಕರೆಯ ಬಹುದು. 'ಬ್ರಹ್ಮನ್' ಎಂಬ ಋತ್ವಿಜನ ಪಾಲಿನ ಹೊಣೆಗೂ ಬ್ರಹ್ಮವೇದದಲ್ಲಿ ಪ್ರೋಕ್ತವಾದ ವಿಷಯಕ್ಕೂ ಬಹು ಸಾಮರಸ್ಯ ವಿದೆ. ಅದರಲ್ಲಿ ಯಜ್ಞಕ್ಕೆ ವಿಘ್ನವುಂಟುಮಾಡುವ ರಾಕ್ಷಸರು, ಗಂಧರ್ವರು, ಅಪ್ಸರರು, ಮತ್ತು ಪಿಶಾಚಿಗಳು ಮುಂತಾದ ದುಷ್ಟಶಕ್ತಿಗಳ ವಿರುದ್ಧ ಮಂತ್ರಗಳಿವೆ. 'ಬ್ರಹ್ಮನ್' ಪುರೋ ಹಿತನು ಈ ರೀತಿಯ ಉಪಟಳವನ್ನು ತಪ್ಪಿಸಬೇಕಾಗಿತ್ತು.

**ಪಾಶ್ಚಾತ್ಯ ವಿದ್ವಾಂಸರ ದೃಷ್ಟಿ:** ಅಥರ್ವವೇದಕ್ಕೆ ಬ್ಲೂಂಫೀಲ್ಡ್, ವಿಂತರ್ ನಿತ್ಸ್, ವ್ಹಿಟ್‌ನೆ ಮುಂತಾದ ಪಾಶ್ಚಾತ್ಯ ವಿದ್ವಾಂಸರು ಮತ್ತೊಂದು ರೀತಿಯ ವಿವರಣೆ ಕೊಡುತ್ತಾರೆ. ಅಥರ್ವವೇದದಲ್ಲಿ ಎರಡು ರೀತಿಯ ಮಂತ್ರಗಳಿವೆ. ಮೊದಲ ರೀತಿಯ ಮಂತ್ರಗಳು ಶುಭಕ್ಕೆ; ಎರಡನೆ ರೀತಿಯ ಮಂತ್ರಗಳು ಅಶುಭ ಪರಿಹಾರಕ್ಕೆ; ಕೇಡನ್ನು ತಪ್ಪಿಸಲು ಮತ್ತು ಅದನ್ನು ಮಾಡಲೆಳಸುವವರಿಗೆ ಕೇಡೆಣಿಸಲು. ಅಥರ್ವನ್ ಪುರೋಹಿತ ತನಗಾಗಿಯೋ, ಇಲ್ಲವೇ ತನಗೆ ದಕ್ಷಿಣಾರೂಪದ 'ಶುಲ್ಕ' ಕೊಡುತ್ತಿದ್ದ ತನ್ನ ಕಕ್ಷಿಗಾರರಿಗಾಗಿಯೋ ಶುಭದಾಯಕ ಮಂತ್ರ

ಗಳನ್ನು ಪಠಿಸಿ, ಅವರಿಗಾಗಿ ದೀರ್ಘಾಯುಸ್ಸು, ಓಜಸ್ಸು, ವೀರ ಪುತ್ರರು, ಪಶುಗಳು, ಅಶ್ವಗಳು ಆದಿಯಾಗಿ ಭೌತಿಕ ಸಂಪತ್ತನ್ನು ಹರಸುತ್ತಿದ್ದನು. 'ಯಜಮಾನ'ನು ರಾಜನಾಗಿದ್ದರೆ ಅವನಿಗೆ ಯುದ್ಧದಲ್ಲಿ ಜಯ, ಸಭೆ ಮತ್ತು ಸಮಿತಿಗಳಲ್ಲಿ ಜಯ ಮುಂತಾದುವನ್ನು ದೊರಕಿಸಿಕೊಡಲು ಪ್ರಾರ್ಥಿಸುತ್ತಿದ್ದನು. ಹೀಗೆ ಶುಭಕ್ಕಾಗಿ ಇರುವ ಮಂತ್ರಗಳೇ ಒಂದು ಬಗೆ. ಇವಕ್ಕೆ ಬಿಳಿಯ ಮಾಟ-ಶುಕ್ಲೇಂದ್ರಜಾಲ (white magic) ಎನ್ನಬಹುದು. ಇದು ಕೇವಲ ಆತ್ಮರಕ್ಷಣೆ.

ಇದೇ ರೀತಿ 'ಆಂಗಿರಸ'ನೆಂಬ ಅಥರ್ವವೇದೀಯ ಋಷಿ ತನಗಾಗಿ ಇಲ್ಲವೇ ತನ್ನ 'ಯಜಮಾನ' ನಿಗಾಗಿ "ಯೋऽಸ್ಮಾನ್ ದ್ವೇಷ್ಟಿ ಯಂ ವಯಂ ದ್ವಿಷ್ಮಸ್ತಂ ವೋ ಜಂಭೇ ದಧ್ಮಃ"— "ಆರೆಮ್ಮ ದ್ವೇಷಿಪನೊ, ಆರನಾವ್ ದ್ವೇಷಿಪೆವೊ ನೂಕುವೆವು ಅವನ ನಿಮ್ಮಯ ದಾಡೆಗೆ," ಎಂದು ವೈರಿಗಳ ಓಜಸ್ಸು, ತೇಜಸ್ಸು ಎಲ್ಲವನ್ನೂ ಚೂರು ಚೂರು ಮಾಡಿ ನುಚ್ಚುನೂರಾಗಿಸಿ ಆ ಶತ್ರುಶಾಸ್ತಿಯನ್ನೇ ಚರಮಗುರಿಯಾಗಿಟ್ಟುಕೊಂಡು ಕೆಲವು ಮಂತ್ರಗಳನ್ನು ಪಠಿಸುತ್ತಿದ್ದನು. ಶತ್ರು ಮತ್ತೊಬ್ಬ ಮಾಟಗಾರನಾಗಿರಬಹುದು; ಪರರಾಜನಾಗಿರಬಹುದು; ಸವತಿಯಾಗಿರಬಹುದು; ಒಬ್ಬನಿಗಾಗಿ ಇಬ್ಬರೋ, ಒಬ್ಬಳಿಗಾಗಿ ಇಬ್ಬರೋ ಪ್ರೇಮಿಗಳಿರಬಹುದು; ಗಂಧರ್ವರು, ಅಪ್ಸರರು, ಪಿಶಾಚಿಗಳು, ದುಷ್ಟಶಕ್ತಿಗಳು, ರೋಗರುಜಿನಗಳು, ಕಡೆಗೆ ಕ್ರಿಮಿಕೀಟಗಳು, ಹಾವು ಚೇಳುಗಳಿರಬಹುದು. ಈ ರೀತಿ ಎಲ್ಲರ, ಎಲ್ಲವುಗಳ ಆಕ್ರಮಣವನ್ನು ತಪ್ಪಿಸಿ ತನ್ನೂ್ರಲಕ ಮಾಡಿಕೊಳ್ಳಲೆಳಸುವ ಆತ್ಮರಕ್ಷಣೆ; ಅದಕ್ಕಾಗಿ ಶತ್ರುಶಾಸನ ಆಂಗಿರಸ ಮಂತ್ರಗಳ ಉದ್ದೇಶ. ಈ ಎರಡನೆ

ರೀತಿಯ ಮಂತ್ರಗಳ ದೃಷ್ಟಿ ಅಶುಭ. ಇದನ್ನು ಕಾಳಮಾಟ—ಕೃಷ್ಣೇಂದ್ರ ಜಾಲ—ಎನ್ನಬಹುದು. (Black Magic).

ಇದೇ ಮೇಲೆ ಹೇಳಿದ ವಿದ್ವಾಂಸರ ಅಭಿಪ್ರಾಯ. ಆದರೆ ಇದು ಅಷ್ಟು ನಿಖರವಾದ ತೀರ್ಮಾನವಾಗಲಾರದು. ಕಾರಣ, ಅಶುಭ ಉದ್ದೇಶಗಳಿಗಾಗಿ ಆಥರ್ವಣ ಮಂತ್ರಗಳಿವೆ; ಶುಭೋದ್ದೇಶ ಗಳಿಗಾಗಿ ಆಂಗಿರಸ ಮಂತ್ರಗಳಿವೆ ಅಥರ್ವವೇದದಲ್ಲಿ.

**ಭೈಷಜ್ಯವೇದ :** ಅಥರ್ವವೇದದಲ್ಲಿ ರೋಗರುಜಿನಗಳ ಪರಿ ಹಾರಕ್ಕಾಗಿ ನಾನಾವಿಧವಾದ ಗಿಡ ಮೂಲಿಕೆ ಇತ್ಯಾದಿಗಳ ಪ್ರಯೋಗ ಪೂರ್ವಕವಾದ ' ಭೈಷಜ್ಯಾನಿ ' ಎಂಬ ಹಲವಾರು ಮಂತ್ರಗಳಿವೆ. ಭಾರತೀಯ ವೈದ್ಯಶಾಸ್ತ್ರಕ್ಕೆ ಅಥರ್ವವೇದ ಅದ್ಯ ಮತ್ತು ಭದ್ರ ಬುನಾದಿ. ಆದ್ದರಿಂದ ಇದನ್ನು ' ಭೈಷಜ್ಯ ' ವೇದವೆನ್ನುವರು. ಭೇಷಜವೆಂದರೆ ಔಷಧಿ ಎಂದರ್ಥ.

**ಕ್ಷತ್ರವೇದ :** ' ಭೈಷಜ್ಯ ' ವೇದವೆನ್ನುವಂತೆಯೇ ಅಥರ್ವ ವೇದವನ್ನು ' ಕ್ಷತ್ರ ' ವೇದವೆಂದೂ ಕರೆಯುವುದು ರೂಢಿಯಾ ಗಿದೆ. ಇದರಲ್ಲಿ ' ರಾಜಕರ್ಮಾಣಿ ' ಎಂಬ ರಾಜರುಗಳ ಚುನಾ ವಣೆ, ಸಭೆ ಮತ್ತು ಸಮಿತಿಯ ಜೋಣೆ, ಕಿರೀಟ ಧಾರಣೆ, (ರಾಜಪಟ್ಟಾಭಿಷೇಕ) ಯುದ್ಧದಲ್ಲಿ ಜಯಕ್ಕಾಗಿ ಪ್ರಾರ್ಥನೆ, ರಣಭೇರೀ ವಾದನ, ಶತ್ರು ಪರಾಜಯ, ಭ್ರಷ್ಟ ರಾಜನನ್ನು ಪುನಃ ಸುಸ್ಥಿತನನ್ನಾಗಿ ಮಾಡುವುದು ಮುಂತಾದ ರಾಜಕೀಯ ವಿಷಯಕ್ಕೆ ಸಂಬಂಧಪಟ್ಟ ಮಂತ್ರಗಳಿವೆ. ಬೃಹಸ್ಪತಿ, ಶುಕ್ರಾ ಚಾರ್ಯರ ನೀತಿಶಾಸ್ತ್ರ ಗ್ರಂಥಗಳಿಗೂ, ಕೌಟಿಲ್ಯನ ಅರ್ಥ ಶಾಸ್ತ್ರಕ್ಕೂ ಅಥರ್ವವೇದವು ಗಣನೀಯ ಆಧಾರವಾಗಿದೆ. ಆದುದರಿಂದ ಕ್ಷಾತ್ರ ವಿಷಯಗಳಿಗೆ ಸಂಬಂಧಿಸಿದ ಈ ವೇದ ವನ್ನು ' ಕ್ಷತ್ರ ' ವೇದವೆಂದೂ ಕರೆಯುವರು.

**ಅಥರ್ವವೇದದ ಗಾತ್ರ:** ಇಲ್ಲಿಯತನಕ ನಾಲ್ಕನೆಯ ವೇದವನ್ನು ಯಾವ ಯಾವ ಹೆಸರಿನಿಂದ ಕರೆಯುತ್ತಾರೆ, ಆ ಹೆಸರಿನ ಸ್ಥೂಲಾರ್ಥವೇನಿರಬಹುದೆಂದು ಚರ್ಚಿಸಿದುದಾಯಿತು. ಇನ್ನು ಇದರ ಗಾತ್ರವೇನು, ಇದಕ್ಕೂ ಋಗ್ವೇದಕ್ಕೂ ಇರುವ ಸಂಬಂಧವೇನು ತಿಳಿಯಲು ಪ್ರಯತ್ನಿಸೋಣ.

ಅಥರ್ವವೇದದಲ್ಲಿ ಇಪ್ಪತ್ತು 'ಕಾಂಡ'ಗಳಿವೆ. ಪ್ರತಿ ಕಾಂಡದಲ್ಲಿಯೂ ಎಷ್ಟೋ ಸೂಕ್ತಗಳು. ಉದಾಹರಣೆಗೆ ಹದಿನೇಳನೆಯ ಕಾಂಡದಲ್ಲಿ ಒಂದೇ ಸೂಕ್ತ. ಹದಿನಾಲ್ಕರಲ್ಲಿ ಎರಡೇ ಸೂಕ್ತಗಳು. ಹದಿನೆಂಟರಲ್ಲಿ ನಾಲ್ಕು ಸೂಕ್ತಗಳು. ಹನ್ನೆರಡರಲ್ಲಿ ಐದು. ಇಪ್ಪತ್ತನೆಯ ಕಾಂಡದಲ್ಲಿ ನೂರ ನಲವತ್ತಮೂರು ಸೂಕ್ತಗಳು—ಇದೇ ಹೆಚ್ಚು ಸೂಕ್ತಗಳ ಕಾಂಡ. ಮಂತ್ರ ಸಂಖ್ಯೆಯಲ್ಲೂ ಹೀಗೆಯೇ. ಒಂದೇ ಸೂಕ್ತದ ಹದಿನೇಳನೆಯ ಕಾಂಡದಲ್ಲಿ ಕೇವಲ ಮೂವತ್ತು ಮಂತ್ರಗಳಿವೆ. ಇದೇ ಎಲ್ಲದಕ್ಕಿಂತ ಚಿಕ್ಕ ಕಾಂಡ. ಇಪ್ಪತ್ತನೆಯ ಕಾಂಡದಲ್ಲಿ ೯೫೮ ಮಂತ್ರಗಳಿವೆ. ಇದೇ ದೊಡ್ಡ ಕಾಂಡ. ಒಟ್ಟು ಸುಮಾರು ಆರುಸಹಸ್ರ ಮಂತ್ರಗಳು ಇವೆ.

ಸೂಕ್ತಗಳ ಗಣನೆಯಲ್ಲಿ ಒಬ್ಬೊಬ್ಬ ವಿಮರ್ಶಕರ ವಾ ಸಂಪಾದಕರ ಅಭಿಪ್ರಾಯ ಒಂದೊಂದು ರೀತಿಯಾಗಿದೆ. ಇವಕ್ಕೆ ಅಥರ್ವವೇದದಲ್ಲಿರುವ ಗದ್ಯಭಾಗವನ್ನು ಇಷ್ಟು ಋಕ್ಕುಗಳೆಂದು ಎಣಿಸುವುದರಲ್ಲಿರುವ ವೈವಿಧ್ಯತೆಯೇ ಕಾರಣ. ಬ್ಲೂಂ ಫೀಲ್ಡ್‌ರವರು ೭೩೦ ಸೂಕ್ತಗಳೆನ್ನುವರು. ಶಂಕರ್. ಎಸ್. ಪಂಡಿತರು ೭೫೯ ಎನ್ನುವರು. ವ್ಹಿಟ್‌ನೆಯವರು ೫೯೮ ಎಂದೂ, ಭಾರತೀಯ ಸಂಪಾದಕರಿನ್ನೊಬ್ಬರು (ಅಜ್ಮೀರ್) ೭೩೧ ಎಂದೂ ಅಭಿಪ್ರಾಯ ಪಡುವರು. ಆದರೆ ಒಟ್ಟು ಮಂತ್ರಗಳ ಎಣಿಕೆಯಲ್ಲಿ ಹೆಚ್ಚು ವ್ಯತ್ಯಾಸ ತೋರುವುದಿಲ್ಲ.

ಈ ಕೆಳಗಿನ ಕೋಷ್ಟಕವು ಅಥರ್ವವೇದದ ಕಾಂಡ, ಸೂಕ್ತ, ಮಂತ್ರಗಳು, ಮತ್ತು ಅವುಗಳ ವಿಷಯ ಇವುಗಳನ್ನು ಅರಿಯಲು ಸಹಾಯಕವಾಗಿದೆ.

| ಕಾಂಡ | ಸೂಕ್ತಗಳು | ಮಂತ್ರಗಳು | ವಿಷಯ | ಸೂಕ್ತಗಳ ಸಾಮಾನ್ಯ ಮಂತ್ರ ಸಂಖ್ಯೆ |
|---|---|---|---|---|
| ೧ | ೩೫ | ೧೫೩ | ನಾನಾ ಬಗೆ | ನಾಲ್ಕು |
| ೨ | ೩೬ | ೨೦೭ | ,, | ಐದು |
| ೩ | ೩೧ | ೨೩೦ | ,, | ಆರು |
| ೪ | ೪೦ | ೩೨೪ | ,, | ಏಳು |
| ೫ | ೩೧ | ೩೭೬ | ,, | ಎಂಟು |
| ೬ | ೧೪೨ | ೪೫೪ | ,, | ಮೂರು |
| ೭ | ೧೧೮ | ೨೮೬ | ,, | ಒಂದು |
| ೮ | ೧೦ | ೨೯೩ | ,, | ನಿಗದಿಯಿಲ್ಲ |
| ೯ | ೧೦ | ೩೧೩ | ,, | ,, |
| ೧೦ | ೧೦ | ೩೫೦ | ,, | ,, |
| ೧೧ | ೧೦ | ೩೧೩ | ,, | ,, |
| ೧೨ | ೫ | ೩೦೪ | ,, | ,, |
| ೧೩ | ೯ | ೧೮೮ | ರೋಹಿತ ಕಾಂಡ | ,, |
| ೧೪ | ೨ | ೧೩೯ | ವಿವಾಹ ಕಾಂಡ | — |
| ೧೫ | ೧೮ | ೨೨೦ | ವ್ರಾತ್ಯ ಕಾಂಡ | ಗದ್ಯರೂಪ |
| ೧೬ | ೯ | ೨೦೩ | ದುಷ್ಸ್ವಪ್ನ ನಾಶನ | ಬಹುಭಾಗ ಗದ್ಯ |
| ೧೭ | ೧ | ೩೦ | ವಿಷಾಸಹೀ | — |
| ೧೮ | ೪ | ೨೮೩ | ಪಿತೃಮೇಧ ಕಾಂಡ | — |

| ಕಾಂಡ | ಸೂಕ್ತಗಳು | ಮಂತ್ರಗಳು | ವಿಷಯ | ಸೂಕ್ತಗಳ ಸಾಮಾನ್ಯ ಮಂತ್ರ ಸಂಖ್ಯೆ |
|---|---|---|---|---|
| ೧೯ | ೭೨ | ೪೫೩ | ನಾನಾ ವಿಷಯಗಳು | ಬಹುಭಾಗ ಋಗ್ವೇದ |
| ೨೦ | ೧೪೩ | ೯೫೮ | ,, | ಶೇ. ೯೦ ಋಗ್ವೇದ |

ಸೂಕ್ತಗಳ ಮಂತ್ರಸಂಖ್ಯೆಗನುಗುಣವಾಗಿ ಮೊದಲಿನ ಏಳು ಕಾಂಡಗಳು ಲಘುಸೂಕ್ತಗಳು. ಎಂಟರಿಂದ ಹನ್ನೆರಡನೆಯ ಕಾಂಡ ಪೂರ್ತಾ ದೀರ್ಘಸೂಕ್ತಗಳು. ಹದಿಮೂರರಿಂದ ಹದಿನೆಂಟರ ತನಕ ಒಂದೊಂದರಲ್ಲಿ ಒಂದೊಂದು ವಿಷಯ. ಅಥರ್ವವೇದವು ಕೇವಲ ಹದಿನೆಂಟು ಕಾಂಡವಿತ್ತೆಂದೂ, ಹತ್ತೊಂಭತ್ತು ಮತ್ತು ಇಪ್ಪತ್ತನೆಯ ಕಾಂಡಗಳು ಇದಕ್ಕೆ 'ವೇದಸ್ಥಾನ' ದೊರಕಿಸಿಕೊಡಲು ಆಮೇಲೆ ಋಗ್ವೇದದಿಂದ ಸೇರಿಸಲ್ಪಟ್ಟವೆಂದೂ ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಇದಕ್ಕೆ ಹತ್ತೊಂಭತ್ತನೆಯ ಕಾಂಡದ ಇಪ್ಪತ್ತಮೂರನೇ ಸೂಕ್ತವು ಕೊಡುವ ಅಥರ್ವವೇದದ ಅನುಕ್ರಮಣಿಯೂ ಒಂದು ಆಧಾರ.

**ಅಥರ್ವವೇದವೂ ಋಗ್ವೇದವೂ :** ವೇದಗಳಲ್ಲೆಲ್ಲಾ ಅತಿ ಪುರಾತನವಾದ ಋಗ್ವೇದಕ್ಕೆ ಕಾಲದ ದೃಷ್ಟಿಯಿಂದ ಆದ್ಯತೆಯಿರುವಂತೆಯೇ ಮಹತ್ತಿನಲ್ಲೂ ಬೃಹತ್ತಿನಲ್ಲೂ ಅಗ್ರಸ್ಥಾನವಿದೆ. ಯಜುರ್ವೇದದ ಬಹುಭಾಗ, ಎಲ್ಲೋ ಕೆಲವು ಸೂಕ್ತಗಳನ್ನು ಬಿಟ್ಟರೆ ಪೂರ್ತಾ ಸಾಮವೇದ ಋಗ್ವೇದದ ಪುನಃ ಪಾಠ. ಇದಕ್ಕೆ ಅಥರ್ವವೇದಸಂಹಿತೆ ಹೊರತಲ್ಲ. ಋಗ್ವೇದದಲ್ಲಿ (ಶಾಕಲ ಶಾಖೆ) ೧೦೧೭ ಸೂಕ್ತಗಳೂ ೧೦,೫೮೦ ೧/೪ ಮಂತ್ರಗಳೂ

೪,೩೨,೦೦೦ ಅಕ್ಷರಗಳೂ (ವರ್ಣಗಳಲ್ಲ) ಇವೆ. ಅಥರ್ವವೇದದಲ್ಲಿ ಸುಮಾರು ೭೩೦ ಸೂಕ್ತಗಳೂ, ೬,೦೦೦ ಮಂತ್ರಗಳೂ ೨,೧೩,೭೦೦ ಅಕ್ಷರಗಳೂ ಇವೆ. ಅಲ್ಲಿಗೆ ಅಥರ್ವವೇದ ಋಗ್ವೇದದ ಸುಮಾರು ಅರ್ಧದಷ್ಟಿದೆ. ಸುಮಾರು ೧,೨೦೦ ಮಂತ್ರಗಳು (೨೦ನೆಯ ಕಾಂಡದ ಕುಂತಾಪ ಸೂಕ್ತಗಳನ್ನು ಬಿಟ್ಟು ಉಳಿದ ಎಲ್ಲಾ ಭಾಗ, ೧೯ನೆಯ ಕಾಂಡದ ಬಹುಭಾಗ ಇತ್ಯಾದಿ) ಎಂದರೆ ಅಥರ್ವವೇದದ ಐದನೆಯ ಒಂದುಭಾಗ ಋಗ್ವೇದದ ಋಣ. ಇಪ್ಪತ್ತನೆಯ ಕಾಂಡದ ೧೩೧ ಸೂಕ್ತಗಳನ್ನು ಚ, ತು ತಪ್ಪದೆ ಋಗ್ವೇದದಿಂದ ಉದ್ಧರಿಸಿದೆ.

ಇನ್ನೊಂದು ವಿಷಯವನ್ನಿಲ್ಲಿ ನಾವು ಗಮನಿಸಬಹುದು. ಋಗ್ವೇದವೆಲ್ಲವೂ ಪದ್ಯರೂಪದಲ್ಲಿದೆ. ಛಂದೋಬದ್ಧವಾಗಿದೆ. ಆದರೆ ಅಥರ್ವವೇದದ ಸುಮಾರು ಆರನೆಯ ಒಂದುಭಾಗ ಗದ್ಯ ರೂಪವಾಗಿದೆ.

ಋಗ್ವೇದದ ಒಂದನೆಯ ಮತ್ತು ಹತ್ತನೆಯ ಮಂಡಲಗಳಿಂದ ಹೆಚ್ಚು ಋಕ್ಕುಗಳನ್ನು ಎರವಲು ಪಡೆದಿರುವಂತೆಯೇ ಈ ಎರಡು ವೇದಗಳಿಗೂ ವಿಷಯದಲ್ಲೂ ಸಹ ಸಾಮರಸ್ಯವಿರುವ ಕೆಲವು ಸೂಕ್ತಗಳಿವೆ. ಋಗ್ವೇದದ ಸುಮಾರು ಮೂವತ್ತು ಸೂಕ್ತಗಳು ದೇವತೆಗಳಿಗಾಗಲೀ ದೇವತಾಸಮಾನ ವಸ್ತುಗಳಿಗಾಗಲೀ ಸಂಬೋಧಿಸಲ್ಪಟ್ಟಿಲ್ಲ. ಸುಮಾರು ಹನ್ನೆರಡು ಸೂಕ್ತಗಳು ಜ್ವರನಾಶನ, ವಿಷನಾಶನ, ಇತರ ದೋಷಗಳ ನಿವಾರಣೆಗೆ ಸಂಬಂಧಿಸಿವೆ.

ಋಗ್ವೇದದಲ್ಲಿ ಅದರಲ್ಲೂ ಹತ್ತನೆಯ ಮಂಡಲದಲ್ಲಿ ಇರುವ ದರ್ಶನ ಸೂಕ್ತಗಳಿಗೂ ಅಥರ್ವವೇದದ ದರ್ಶನ ಸೂಕ್ತಗಳಿಗೂ ಸಂಬಂಧವಿದೆ. ಋಗ್ವೇದದಲ್ಲಿ ಬೀಜರೂಪದಿಂದ ಆವಿರ್ಭವ

ಹೊಂದಿದ ತಾತ್ವಿಕದೃಷ್ಟಿ ಬ್ರಾಹ್ಮಣ, ಆರಣ್ಯಕ ಮತ್ತು ಉಪ ನಿಷತ್ತುಗಳಲ್ಲಿ ಹುಟ್ಟಿಬೆಳೆದು ಭವ್ಯರೂಪ ತಾಳಿ ಫಲಿತವಾಗಿ ನಿಂತಿದೆ. ಇವೆರಡನ್ನೂ ಕೂಡಿಸುವ ವಿಶಿಷ್ಟ ಶಕ್ತಿ ಅಥರ್ವವೇದ ಕ್ಕಿದೆ. ಅಥರ್ವವೇದದಲ್ಲಿರುವಷ್ಟು ದರ್ಶನಸೂಕ್ತಗಳು ಋಗ್ವೇದ ದಲ್ಲೂ ಇಲ್ಲ. ಆದರಲ್ಲಿರುವ ಮಾಟದ ಹಿನ್ನೆಲೆಯನ್ನು ಬದಿಗಿಟ್ಟು ವಿಮರ್ಶಿಸುವುದಾದರೆ ಅಥರ್ವವೇದದ ತಾತ್ತ್ವಿಕದೃಷ್ಟಿ ಬಹು ಉನ್ನತಮಟ್ಟದ್ದಾಗಿದೆ.

## ೨. ಅಥರ್ವವೇದ—ಆಯುರ್ವೇದ.

**ಭೈಷಜ್ಯಾನಿ :** ಅಥರ್ವವೇದದಲ್ಲಿ ನಾನಾವಿಧವಾದ ರೋಗ ಗಳು, ಆವುಗಳು ಉತ್ಪತ್ತಿಯಾಗುವ ಬಗೆ, ಅವುಗಳ ಲಕ್ಷಣ, ಶರೀರದ ಯಾವ ಯಾವ ಭಾಗದಲ್ಲಿ ಅವು ಉತ್ಪತ್ತಿಯಾಗಿ ಉಲ್ಬಣಿಸುತ್ತವೆ, ರೋಗಕ್ಕೆ ಕಾರಣಗಳು, ಅವುಗಳಿಂದ ಮುಕ್ತಿಹೊಂದಲು ಪ್ರಯೋಗಿಸುತ್ತಿದ್ದ ವನೌಷಧಿಗಳು ಮುಂತಾ ದುವನ್ನು ತಿಳಿಸುವ ಸೂಕ್ತಗಳು ಬೇಕಾದಷ್ಟಿವೆ. ಇವುಗಳನ್ನು ವೈದ್ಯಕೀಯಸೂಕ್ತಗಳು "ಭೈಷಜ್ಯಾನಿ" ಎಂದು ಕರೆಯ ಬಹುದು.

ಅಥರ್ವವೇದದ ಆರ್ಯರು "ದೀರ್ಘಾಯುತ್ವಾಯ, ಶತ ಶಾರದಾಯ", ಎಂದು ಶತಶರದೃತುಗಳನ್ನು ಕಾಣುವ ದೀರ್ಘಾಯುಸ್ಸನ್ನು ಕೇಳಿಕೊಂಡದ್ದಷ್ಟೇ ಅಲ್ಲದೆ ಆ ನೂರು ವರುಷಗಳೂ ಅನಾರೋಗ್ಯದಿಂದ ನರಳಿ, ಕೊರಗಿ, ಸೊರಗಿ ಸಾಯಲಿಚ್ಛಿಸಲಿಲ್ಲ. ತಮಗೆ ವೀರಪುತ್ರರು, ಪಶುಗಳು, ಅಶ್ವ ಗಳು, ಇತ್ಯಾದಿ ಜಾನುವಾರು ಸಂಪತ್ತು ಮತ್ತು ಇತರ ಭೌತಿಕ ಸಂಪತ್ತು ಎಷ್ಟು ಮುಖ್ಯವೋ ಅವುಗಳನ್ನು ಅನುಭವಿಸುವು

ದಕ್ಕೂ ಸಹ ಕಲ್ಲಿನಂತಹ, ನೀರೋಗ ದೃಢಕಾಯವೂ ಅಷ್ಟೇ ಮುಖ್ಯವೆಂದು ಭಾವಿಸಿಕೊಂಡಿದ್ದರು. ಅದಕ್ಕಾಗಿ ಅನುದಿನ ತಮ್ಮ ಆಶೆ ಆಕಾಂಕ್ಷೆಗಳನ್ನು ಕಂಡಕಂಡ ಇಲ್ಲವೇ ಭಾವಿಸಿ ಕೊಂಡ ದೇವತೆಗಳಲ್ಲಿ ತೋಡಿಕೊಂಡರು.

“ **ಅಶ್ಮಾನಂ ತನ್ವಂ ಕೃಧಿ** ”. (೧.೨.೨)

ಕಲ್ಲಾಗಿ ಮಾಡೆಮ್ಮ ಕಾಯವನು.

**ಏಹ್ಯಶ್ಮಾನಮಾ ತಿಷ್ಠಾಶ್ಮಾ ಭವತು ತೇ ತನೂಃ**
**ಕೃಣ್ವಂತು ವಿಶ್ವೇ ದೇವಾ ಆಯುಷ್ಟೇ ಶರದಃ ಶತಂ.**

೨.೧೩.೪

“ ಬಾ, ಕಂದ, ಕಲ್ಲಮೇಲೆ ಬಂದು ನಿಲ್ಲು. ನಿನ್ನ ತನು ಕಲ್ಲಾಗಲಿ. (ಕಲ್ಲಿನ ಕಾಠಿಣ್ಯ ಅದಕ್ಕೆ ಬರಲಿ). ಸಕಲ ದೇವತೆಗಳೂ ನಿನಗೆ ನೂರು ಶರತ್ಕಾಲಗಳ ದೀರ್ಘಾಯುಸ್ಸ ನ್ನೀಯಲಿ. ”

ಎಂದು, ಪುರಾತನ ಸ್ಪಾರ್ಟನ್ ಜನರು ತಮ್ಮ ಸಂತತಿ ಪ್ರಕೃತಿಯ ಪ್ರಕೋಪಕ್ಕೆ ಎದೆಗೊಟ್ಟು ನಿಂತು, ಸೆಣಸಿ, ವೀರರಾಗಿ ಜೀವಿಸಿ, ವೀರಮರಣ ಹೊಂದಬೇಕೆಂದು ಬಯಸುತ್ತಿದ್ದಂತೆ ಅವರಿಗಿಂತಲೂ ಮೊದಲೇ ನಮ್ಮ ಪುರಾತನ ಆರ್ಯರು ಮಗು ಹುಟ್ಟಿದ ಘಳಿಗೆಯಲ್ಲೇ ತಮ್ಮ ಹಸುಗೂಸು ವಜ್ರಕಾಯನಾಗಲೆಂದು ಹಾರೈಸಿದರು. ಇದಕ್ಕಾಗಿ ವಿಶ್ವೇದೇವರುಗಳಿಗೂ ಹರಕೆ ಸಲ್ಲಿಸಿದರು.

**ಶರೀರದ ಅಂಗಗಳು:** ಸಂಪೂರ್ಣ ಆರೋಗ್ಯ ಮತ್ತು ಸುಖ ಸಂತೋಷಗಳಿಂದ ಕೂಡಿದ ತುಂಬು ಬದುಕನ್ನು ಬಾಳಲು ತಮ್ಮದೇ ಆದ ರೀತಿಯಲ್ಲಿ ಆಯುರ್ವೇದವನ್ನು—ಶರೀರ

ವಿಜ್ಞಾನವನ್ನು—ಬೆಳಸಿಕೊಂಡರು. ಶರೀರದ ಅವಯುವಗಳ ನ್ನೆಲ್ಲಾ ಇಂತಿಂತಹವೆಂದು ವಿಭಜಿಸಿ ಆಯಾ ಭಾಗಕ್ಕೆ ತಕ್ಕ ಹೆಸರನ್ನು ಕೊಟ್ಟರು. ಯಾವ ಯಾವ ಅಂಗಗಳು ಯಾವ ಯಾವ ರೋಗಕ್ಕೆ ತುತ್ತಾಗುತ್ತವೆಂಬುದನ್ನು ಮನಗಂಡರು. ಮಾಟವೋ ಮೂಢನಂಬಿಕೆಯೋ, ಅಜ್ಞಾನವೋ ವಿಜ್ಞಾನವೋ ಯಾವುದರ ಸಹಾಯ ಸಿಕ್ಕಿದರೂ ಸರಿಯೆ ರೋಗಗಳು, ಅವುಗಳಿಗೆ ಕಾರಣ, ಪರಿಹರಿಸುವ ರೀತಿ ಇವುಗಳನ್ನು ಕಂಡು ಹಿಡಿದರು. ಶರೀರದ ಅಂಗಾಂಗಗಳನ್ನು ವಿಭಜಿಸಿ ಅವರು ಹೆಸರುಕೊಟ್ಟಿರುವ ರೀತಿಯನ್ನು ನೋಡಿದರೆ ಅಷ್ಟು ಪುರಾತನ ಕಾಲದಲ್ಲೇ ನಮ್ಮವರು ಶಸ್ತ್ರ ಚಿಕಿತ್ಸೆಯಲ್ಲಿ ನಿಪುಣರಾಗಿದ್ದರೆನಿಸುತ್ತದೆ.

ಅಥರ್ವವೇದದ ಎರಡನೆಯ ಕಾಂಡದ ಮೂವತ್ತುಮೂರನೆಯ ಸೂಕ್ತವಂತೂ ಅತ್ಯಾಧುನಿಕ ವೈದ್ಯಕೀಯ ಗ್ರಂಥವೊಂದು ಮಾನವದೇಹದ ಅಂಗಾಗಗಳನ್ನು ಹೆಸರಿಸುವಂತೆ ಕ್ರಮವರಿತು ಹೆಸರಿಸುತ್ತದೆ. ಅಲ್ಲಿರುವ ರೀತಿಯಲ್ಲೇ ಹೇಳೋಣ.

೧. ನಾಸಿಕ (ಮೂಗು, ಮೂಗಿನ ಹೊಳಲೆ)
೨. ಕರ್ಣ–ಕಿವಿ
೩. ಛುಬುಕ–ಗಲ್ಲ
೪. ಶೀರ್ಷ–ಶಿರ
೫. ಮಸ್ತಿಷ್ಕ–ಮೆದುಳು
೬. ಜಿಹ್ವಾ–ನಾಲಗೆ
೭. ಗ್ರೀವ–ಕತ್ತು
೮. ಉಷ್ಣಿಹಾ–ಹೆಕ್ಕತ್ತು
೯. ಕೀಕಸ–ಎದೆಯ ಮೂಳೆ
೧೦. ಆನೂಕೀ–ಬೆನ್ನು ಹುರಿ
೧೧. ಅಂಸ–ಭುಜ
೧೨. ಬಾಹು–ತೋಳು
೧೩. ಹೃದಯ–ಎದೆ
೧೪. ಕ್ಲೋಮನ್–ಶ್ವಾಸಕೋಶ
೧೫. ಹಲೀಕ್ಷ್ಣ–ಪಿತ್ತಕೋಶ
೧೬. ಪಾರ್ಶ್ವ–ಪಕ್ಕ
೧೭. ಮತಸ್ನ–ಮೂತ್ರಜನಕಾಂಗ
೧೮. ಪ್ಲೀಹ–ಗುಲ್ಮ
೧೯. ಯಕೃತ್
೨೦. ಆಂತ್ರ–ಕರುಳು

೨೧. ಗುದ-ಹಿಂಭಾಗ
೨೨. ವನಿಷ್ಠ-ದೊಡ್ಡಕರುಳು
೨೩. ಉದರ | ಹೊಟ್ಟೆ
೨೪. ಕುಕ್ಷಿ |
೨೫. ಪ್ಲಾಶಿ-ನರ
೨೬. ನಾಭಿ-ಹೊಕ್ಕುಳು
೨೭. ಊರು-ತೊಡೆ
೨೮. ಅಷ್ಠೀವತ್-ಮಂಡಿ
೨೯. ಪಾರ್ಷ್ಣಿ-ಹಿಮ್ಮಡಿ
೩೦. ಪ್ರಪದ-ಮುಂಗಾಲು
೩೧. ಭಸದ್-ನಡು
೩೨. ಶ್ರೋಣಿ-ಅಂಡು
೩೩. ಭಂಸಸ್-ಸೊಂಟದ ಹಿಂಭಾಗ
೩೪. ಅಸ್ಥಿ-ಮೂಳೆ
೩೫. ಮಜ್ಜಾ-ಮೇದಸ್ಸು
೩೬. ಸ್ನಾಯು-ಮಾಂಸಖಂಡ
೩೭. ಧಮನಿ-ರಕ್ತನಾಳ
೩೮. ಪಾಣಿ-ಹಸ್ತ
೩೯. ಅಂಗುಲಿ-ಬೆರಳು
೪೦. ನಖ-ಉಗುರು
೪೧. ಲೋಮನ್-ರೋಮ
೪೨. ಪರ್ವನ್-ಸಂಧು, ಕೀಲು
೪೩. ತ್ವಕ್-ಚರ್ಮ
೪೪. ಶಿರಾ-ಸಣ್ಣ ರಕ್ತನಾಳ

ಇಷ್ಟಲ್ಲದೆ ಇತರ ಸೂಕ್ತಗಳಲ್ಲಿ : ಕಂಕುಷ (ಕಿವಿಯ ಬಿಡಿಭಾಗವೊಂದು), ಆಸ್ಯ (ಬಾಯಿ), ಆತ್ಮನ್ (ಆತ್ಮ), ಮೂರ್ಧಾ (ತಲೆ), ಜಾನು (ಮಂಡಿ), ತ್ರಿಕ (ತಿಕ), ಶೇಪ (ಅಂಡಕೋಶ), ಶಿಶ್ನ (ಪುರುಷರ ಗುಪ್ತಾಂಗ), ಯೋನಿ (ಸ್ತ್ರೀಯರ ಗುಪ್ತಾಂಗ), ಪೃಷ್ಟಿ (ಪಕ್ಕೆಲುಬು), ವಕ್ಷಣ (ಅನ್ನ ಕೋಶ), ಗರ್ಭಕೋಶ ಮುಂತಾದ ಇತರ ಅವಯವಗಳೂ ಹೇಳಲ್ಪಟ್ಟಿವೆ.

ಮೂತ್ರ ಮೋಚನಕ್ಕಾಗಿ ಹೇಳಲ್ಪಡುವ ಮತ್ತೊಂದು ಸೂಕ್ತವು, (೧.೩) ಮೂತ್ರಕೋಶ, (ಬಸ್ತಿ), ಗವೀನಿಕಾ (ಮೂತ್ರನಾಳ), ಮೇಹನ (ಗುಪ್ತಾಂಗ), ಆಂತ್ರ (ಕರುಳು) ಮುಂತಾಗಿ ಮನುಷ್ಯನೊಬ್ಬನ ಶರೀರದಿಂದ ಆ ಭಾಗವನ್ನು ಹೊರತೆಗೆದು ಒಂದೊಂದಾಗಿ ಇಕೋ ಮೂತ್ರಕೋಶ, ಇಕೋ ಮೂತ್ರನಾಳ, ಇಕೋ ಮೂತ್ರ ಹೊರಬರುವದಾರಿ, ಇಕೋ

ಮೂತ್ರ 'ಬಳ್ಳೆಂದು' ಹೊರಸುರಿಯುತ್ತಿದೆ ಎಂದು ಕಣ್ಣಾರ ತೋರಿಸಿದಂತೆ ವರ್ಣಿಸುತ್ತದೆ.

ಯದಾಂತ್ರೇಷು ಗವೀನ್ಯೋರ್ಯದ್ ಬಸ್ತಾವಧಿ ಸಂಶ್ರುತಮ್।
ಏವಾ ತೇ ಮೂತ್ರಂ ಮುಚ್ಯತಾಂ ಬಹಿರ್ಬಾಲಿತಿ
ಸರ್ವಕಮ್ ॥ ೧.೩.೬.

ಕರುಳಿನಲಿ, ನಾಳದಲಿ, ಯಾವುದೆಲ್ಲವು ಮತ್ತೆ ಕೋಶದಲ್ಲಿ,
ಸೇರಿಕೊಂಡಿರ್ಪುದೋ ಆ ಮೂತ್ರ ಬಳ್ಳೆಂದು ಹೊರಬೀಳಲಿ.

ಇದು ಮಾನವ ಶರೀರದ ಒಳಭಾಗದ ಅವಯವಗಳ, ಅವಯವಭಾಗಗಳ ಪರಿಜ್ಞಾನವಿಲ್ಲದೆ ಮಾಟಮಾಡಿ ಮೋಡಿ ಮಾಡಿ ಹೇಳುವ ಮಾತಲ್ಲ.

ಇಷ್ಟಲ್ಲದೆ, ಭೌತಿಕ ಶರೀರ ವಿಶ್ಲೇಷಣ ಮಾಡಿ ಅನಂತರ ಮತ್ತೂ ಒಂದು ಹೆಜ್ಜೆ ಮುಂದೆ ಹೋಗಿ, ಮನಸ್ಸು, ಅಸು (ಪ್ರಾಣ), ಪಂಚ ಪ್ರಾಣವಾಯುಗಳು, ಕೊನೆಗೆ ಆತ್ಮ ಮುಂತಾದುವುಗಳ ನೆಲೆಯೂ ಈ ಶರೀರವೇ ಎಂದು ಮನಗಂಡು ಅತಿಭೌತಿಕದತ್ತ-ಆಧ್ಯಾತ್ಮಿಕದತ್ತ-ಕೈದೋರಿ ನಿಂತರು ಅಥರ್ವ ವೇದೀಯ ಆರ್ಯರು.

**ರೋಗಗಳು :** ಮಾನವ ದೇಹದ ಅಂಗಾಂಗಗಳನ್ನು ವಿಶ್ಲೇಷಣ ಮಾಡಿ ಅವುಗಳ ವಿಚಾರವನ್ನರಿತ ಮೇಲೆ ಈ ದೇಹಕ್ಕೆ ಅಂಟಿ ಬರುವ ನಾನಾ ರೋಗಗಳ ಹೆಸರುಗಳನ್ನೂ ಅಥರ್ವ ವೇದದ ಮಂತ್ರದ್ರಷ್ಟಾರರು ನಮ್ಮ ಮುಂದಿಟ್ಟಿದ್ದಾರೆ. ಅವುಗಳಲ್ಲಿ ಕೆಲವು ರೋಗಗಳ ಹೆಸರುಗಳನ್ನು ಕೇಳಿ :—

೧. ತಕ್ಮನ್-ಜ್ವರ
೨. ಕುಷ್ಠ-ತೊನ್ನು
೩. ಶ್ವೇತಕುಷ್ಠ-ಬಿಳಿ ತೊನ್ನು

೪. ಕಾಸ-ಕೆಮ್ಮು
೫. ಬಲಾಸ-ಒಂದು ಬಗೆ ಕ್ಷಯ
೬. ಉದ್ಯುಗ-ರಕ್ತವಿಹೀನತೆ (?)
೭. ಹರಿಮಾ-ಕಾಮಾಲೆ
೮. ವಿಲೋಹಿತ-ರಕ್ತವಿಲ್ಲದಿರುವುದು
೯. ಜಾಯಾನ್ಯ-ಪ್ರಮೇಹ
೧೦. ಪಾಮನ್-ಕಜ್ಜಿ
೧೧. ವಿಸರ-ಬಿರಿಯುವ ನೋವು
೧೨. ಶೀರ್ಷಕ್ತಿ-ತಲೆನೋವು
೧೩. ಕಂಕುಷ-ಕಿವಿ ನೋವು
೧೪. ನಿರಾಲ-ಕಣ್ಣು ನೋವು
ಅಲಜೀ ,,
೧೫. ಆಸ್ರಾವ-ಅತಿಸಾರ, ಆಮಶಂಕೆ
೧೬. ಅಂಕ-ಸಂಧಿವಾತ
ಸಮಂಕ ,,
೧೭. ವಿಷ್ಕಂಧ-ಒಂದು ಬಗೆಯ ವಾತ
೧೮. ದಾಹ
೧೯. ಜಲೋದರ
೨೦. ಶೂಲ-ಇರಿಯುವ ನೋವು
೨೧. ಅಂಗಭೇದ-ಅಂಗಗಳು ಕಿತ್ತುಹೋಗುವಂತೆ ನೋಯುವುದು
೨೨. ಅಂಗಜ್ವರ
೨೩. ಅಭಿಶೋಚ-ಒಂದು ಬಗೆ ಜ್ವರ
೨೪. ವಿಸಲ್ಪಕ-ನರಗಳ ನೋವು (ಎಕ್ಕುವ ನೋವು)
೨೫. ವಿದ್ರಥ-ಕೀವು ಸೇರಿಕೊಳ್ಳುವುದು
೨೬. ಮಲಮೂತ್ರಬಂಧನ
೨೭. ರಕ್ತಸ್ರಾವ
೨೮. ಮೂಳೆ ಮುರಿಯುವುದು

೨೯. ಕೂದಲುದುರುವುದು
೩೦. ಗರ್ಭಪಾತ
೩೧. ಹೃದ್ಯೋತ-ಹೃದಯ ರೋಗ
೩೨. ಯಕ್ಷ್ಮ-ಶ್ವಾಸಕೋಶದ ಕ್ಷಯ
೩೩. ಕಾಹಾಬಾಹ-ಅಜೀರ್ಣದ ಹೊಟ್ಟೆಯ ಗುಡುಗು
೩೪. ಅಪ್ವಾ-ಉದರಶೂಲೆ
೩೫. ಕ್ಷೇತ್ರಿಯ ರೋಗ-ಹುಟ್ಟನಿಂದಲೇ ಬರುವ ರೋಗ
೩೬. ಪ್ರಮೋತ-ಕಿವುಡು
೩೭. ಹುಚ್ಚು
೩೮. ಹಾವು, ಚೇಳು ಕಡಿತ.

ಈ ರೀತಿ ರೋಗಗಳ ಹುಟ್ಟು ಅಥವಾ ಅವುಗಳು ಬರುವ ಶರೀರದ ಭಾಗ, ಇಲ್ಲವೇ ಕಾರಣಗಳು ಇವುಗಳ ಆಧಾರದ ಮೇಲೆ ಅವುಗಳಿಗೆ ಹೆಸರು ಕೊಟ್ಟಮೇಲೆ ಅವು ಬರುವ ರೀತಿ ಯನ್ನು ಅವುಗಳ ಲಕ್ಷಣಗಳನ್ನೂ ಬಹು ವಿವರವಾಗಿ ಬುದ್ಧಿವಂತಿಕೆಯಿಂದ ಚಿತ್ರಿಸಿದ್ದಾರೆ. ಜ್ವರದ ವಿರುದ್ಧವಾಗಿ ಇರುವ ಮಂತ್ರಗಳಂತೂ ನಮ್ಮ ಮುಂದುಗಡೆ ನಮ್ಮ ಮನೆಯ ಡಾಕ್ಟರೊಬ್ಬರು ಹೇಳುತ್ತಿರುವರೋ ಎನ್ನುವಷ್ಟು ಮಟ್ಟಿಗೆ ಜ್ವರದ, ಜ್ವರಬಂದ ರೋಗಿಯ ಚಿತ್ರವನ್ನು ನಮ್ಮ ಮುಂದಿಡುತ್ತವೆ.

ಜ್ವರ (ತಕ್ಮನ್) ನಮ್ಮ ಶರೀರವನ್ನು ಮೊದಲು ತಣ್ಣಗೆ (ಶೀತೋ) ಮಾಡಿ, ಆಮೇಲೆ ಸುಟ್ಟು (ರೂರೋ), ಕೆಮ್ಮು ಬರಿಸಿ ನಡುಗಿಸಿ ಬಿಡುತ್ತದೆ. (೫.೨.೨೦) ಬಂದರೆ ಒಂದೇ ಬರುವುದಿಲ್ಲ. ಬಲಾಸ (ನವೆದುಕೊಳ್ಳುವುದು) ಕಾಸ (ಕೆಮ್ಮು) ಮತ್ತು 'ಉದ್ಯುಗ' (?) ಗಳನ್ನು ಜತೆಯಲ್ಲಿ ತರುತ್ತದೆ. ಪ್ರಜ್ವಲಿಸುವ ಅಗ್ನಿಯಂತೆ ವಿಶ್ವವನ್ನೇ ಒಣಗಿಸಿ ಬಿಡುತ್ತದೆ;

ದಹಿಸಿ ಬಿಡುತ್ತದೆ. ಎಲ್ಲರನ್ನೂ ಹಳದಿಯ ಬಣ್ಣದವರನ್ನಾಗಿ ಸುತ್ತದೆ. (ವಿಶ್ವಾನ್ ಹರಿತಾನ್ ಕೃಣೋಷಿ). ಕೆಲವು ಮಂತ್ರ ಗಳ ಕನ್ನಡ ಅನುವಾದವನ್ನು ಕೇಳಿ :—

ಈ ನೀನು ಎಲ್ಲವನು ಪಳದಿಯಂ ಗೈಯುತಿಹೆ!
ಬೇಯಿಸಿಹೆ ಬೆಂಕಿಯೆಂತಂತೆ ನೀಂ ನೋಯಿಸಿಹೆ!
ಕೀಳೆ ಪೋ, ಓ, ಜ್ವರವೆ! ನೀರಸಂ ನೀನಾಗು!
ಕೆಳಗೊ ಒಳಗೋ ನೀನು ಪೋಗೆಲ್ಲೈ ದೂರ! ೫.೨೨.೨.

* * * * *

ನೆಲೆಯಿದಕೆ ಮೂಜವಂತವು, ನೆಲೆಯು ಮಹವೃಷವು ಮತ್ತೆ,
ಪುಟ್ಟಿದಂದಿಂ ಜ್ವರವೆ, ಬಹ್ಲಿಕದೆ ನೆಲೆಸಿರ್ಪೆಯಲ್ತೆ!
೫. ೨೨. ೫.

* * * * *

ಶೀತರೂಪದೆ ಬಂದು, ಒಡನೊಡನೆ ಬಹುಬೆಂದು;
ಕೆಮ್ಮು ಕೆಳೆಯನು ಸೇರಿ ನಡುಗಿಸುತ್ತಿರುವೆ!
ನಿನ್ನಸ್ತ್ರಗಳು ಭೀಮರೂಪವನು ಪಡೆದಿಹವೆ!
ಅವುಗಳಿಂದೆಮ್ಮನ್ನು ತಪ್ಪಿಸೈ, ಜ್ವರವೆ! ೫.೨೨.೧೦.

* * * * *

ಬೇಡ ನೀನಿವರೊಡನೆ ಕೆಳೆ ಗಳಿಸಬೇಡ;
'ನವೆಯನಂ', 'ಕೆಮ್ಮನಂ', "ಉದ್ಯುಗನ" ತರಬೇಡ!
ಅಲ್ಲಿಂದ ಹಿಂದಿರುಗಿ ಬರಲೆಣಿಸಬೇಡ!
ಅದಕಾಗಿ ಜ್ವರ, ನಿನ್ನ ಬೇಡುವೆನು ಕೇಳಾ! ೫.೨೨.೧೧

* * * * *

ಮೂರರ ಜ್ವರವೂ, ದಿನಬಿಟ್ಟು ದಿನಾ
ಕಾಯುವ ಜ್ವರವೂ, ಒಂದೇ ಸಮನಾ

ಬೇಯುವ ಜ್ವರವೂ, ಶರದಜ್ವರ,
ಚಳಿ ಜ್ವರ, ಮತ್ತಾ ಬೆಂಕಿಯ ಜ್ವರವೂ,
ಸೆಕೆ ಜ್ವರ, ಮಳೆ ಜ್ವರವೆಲ್ಲವನು,
ಹೋಗಿಸು ಎಲ್ಲವ ಓ, ನೀನು! ೫. ೨೨. ೧೩.

ಈ ರೀತಿ ಅಥರ್ವವೇದದ ಭಿಷಗ್ವರರು ಜ್ವರದ ವೈವಿಧ್ಯತೆಯನ್ನು ಕಂಡುಹಿಡಿದುದಲ್ಲದೆ ಅದರ ಲಕ್ಷಣವನ್ನೂ ಹೊರಗೆಡಹಿದ್ದಾರೆ. ಜ್ವರ ಬಹ್ಲಿಕ, ಮೂಜವಂತ, ಮಹಾವೃಷ, ಗಾಂಧಾರ ಮತ್ತು ಮಗಧ ದೇಶಗಳಲ್ಲಿ ಹುಟ್ಟಿ ಹರಡಿತು. ಬಹುಶಃ ಈ ದೇಶಗಳು ಅವರಿದ್ದ ನಾಡಿನ ಎಲ್ಲೆಕಟ್ಟಾಗಿದ್ದುವು. ಜ್ವರ ಅಥರ್ವವೇದದ ಆರ್ಯರಿದ್ದ ನಾಡನ್ನೂ ಬಿಡಲಿಲ್ಲ. ಸಕಲ ರೋಗಗಳ ರೋಗ-ಜ್ವರ-ದ ಉಪಟಳ ಅತಿಯಾಗಿಯೇ ಇದ್ದಿತೆನಿಸುತ್ತದೆ.

ಜ್ವರದ ವಿಷಯವನ್ನು ಅರಿತಿದ್ದ ಅವರು ಅದಕ್ಕಿಂತಲೂ ಭಯಂಕರವಾಗಿದ್ದ ಯಕ್ಷ್ಮಕ್ಕೆ ಮತ್ತೂ ಹೆದರಿದರು. ಅದು ದೇಹದ ಯಾವ ಭಾಗದಲ್ಲಿಯಾದರೂ ಇರಬಹುದು. (೨.೩೩) ತಕ್ಮನ್ (ಜ್ವರ) ಯಕ್ಷ್ಮವನ್ನು ತರುತ್ತದೆ. ಅದರ ಜತೆ ಬರುವ ಬಲಾಸ, ಕಾಸ ಮತ್ತು ಉದ್ಯುಗ ಎಂಬುವು ತಕ್ಮನ್ ಕೆಲಸವನ್ನು ಮತ್ತೂ ಸುಲಭಗೊಳಿಸುತ್ತವೆ ಎಂಬುದು ಅವರಿಗೆ ಗೊತ್ತಿತ್ತು. ಅದು ರಾಜಯಕ್ಷ್ಮ! ಅಜ್ಞಾತಯಕ್ಷ್ಮ! ಈ ಯಕ್ಷ್ಮರೋಗ ನಿವಾರಣೆಗಾಗಿ ಹತ್ತು ಸೂಕ್ತಗಳಾದರೂ ಇವೆಯೆಂದ ಮೇಲೆ ಅದರ ಹಾವಳಿಯೂ ಹೇಳುವಷ್ಟಿದ್ದಿರಲೇಬೇಕು. ಇದೇ ರೀತಿ ಕುಷ್ಠ, ಶ್ವೇತಕುಷ್ಠ, ಹುಚ್ಚು ಇತ್ಯಾದಿಗಳಿಗೂ ಸಹ ಅವರು ಪ್ರತಿಚಿಕಿತ್ಸೆ ಮಾಡಲು ಪ್ರಯತ್ನಿಸಿದರು.

**ರೋಗಕ್ಕೆ ಕಾರಣಗಳು :** ರೋಗಗಳಿಗೆ ನಾನಾವಿಧವಾದ ಕಾರಣಗಳನ್ನು ಅಥರ್ವವೇದವು ಸೂಚಿಸುತ್ತದೆ. ಶಾರೀರಿಕ ಅಥವಾ ಮಾನಸಿಕ ನಿಯಮಗಳ ಉಲ್ಲಂಘನೆ, ವರುಣನೇ ಇತ್ಯಾದಿ ದೇವತೆಗಳ ಪ್ರಕೋಪ, ಮಳೆ, ಸಿಡಿಲು, ಬಿರುಗಾಳಿ ಇತ್ಯಾದಿ ಪ್ರಕೃತಿಯ ಪ್ರಕೋಪ, ಗಂಧರ್ವರು, ಅಸುರರು, ಪಿಶಾಚಿಗಳು, ರಾಕ್ಷಸರು ಅಪ್ಸರರು, ಗ್ರಾಹೀ, ನಿರೃತೀ ಇತ್ಯಾದಿ ದುಷ್ಟ ಶಕ್ತಿಗಳು ; ವೈರಿಗಳ ಮತ್ತು ಮಾಟಗಾರರ ಮಾಟ (ಕೃತ್ಯಾ) ಮತ್ತು 'ಯಾತು' (ಜಾದೂ), ಹಾವು, ಚೇಳು ಕ್ರಿಮಿಕೀಟಗಳು, ವೈರಿಗಳ ವಿಷಲೇಪಿತ ಬಾಣಗಳು, ಉಲೂಕ (ಗೂಗೆ) ಕಪೋತ ಇತ್ಯಾದಿ ದುಷ್ಟ ಶಕುನಗಳ (ಪಕ್ಷಿ) ಪ್ರವೇಶ, ದೇವತೆಗಳಿಗೆಸಗಿದ ಪಾಪ (ದೇವಕಿಲ್ಬಿಷ), ಸುಳ್ಳು ಹೇಳುವುದು, ಆಗರ್ಭ (ಕ್ಷೇತ್ರಿಯ) ರೋಗಗಳು ಇವೆಲ್ಲವೂ ಸಹ ಮಾನವನಿಗೆ ನಾನಾ ವಿಧವಾದ ದೈಹಿಕ ಅಥವಾ ಮಾನಸಿಕ ರೋಗಗಳನ್ನು ತರುತ್ತವೆ ಎಂದು ಅಥರ್ವವೇದದಿಂದ ನಮಗೆ ತಿಳಿದುಬರುತ್ತದೆ. ಮೇಲೆ ಹೇಳಿದ ಜ್ವರದ ಮಂತ್ರದಲ್ಲಿ ಸೂಚಿಸಲ್ಪಟ್ಟಿರುವಂತೆ ರೋಗಗಳು ಇತರ ಕಡೆಗಳಿಂದಲೂ ಸಾಂಕ್ರಾಮಿಕಗಳಾಗಿ ಹರಡುತ್ತಿದ್ದುವು.

**ರೋಗಕ್ಕೆ ಪರಿಹಾರ :** ರೋಗಗಳಿಗೆ ಕಾರಣಗಳನ್ನು ಅನುಭವಿಸಿ ಕಂಡೋ, ನೋಡಿಯೋ, ಊಹಿಸಿಯೋ ಆದ ಮೇಲೆ ಅವುಗಳಿಗೆ ಉಚಿತವೆನಿಸಿದ ನಾನಾ ಚಿಕಿತ್ಸೆಗಳನ್ನು ಅಥರ್ವವೇದೀಯರು ಕಂಡು ಹಿಡಿದರು.

ಯಾವ ರೋಗಕ್ಕಾಗಲೀ ಬಹು ಮುಖ್ಯವಾದ ಸಿದ್ಧೌಷಧ-ರಾಮಬಾಣ-ಅಥರ್ವನ್ ಪುರೋಹಿತನ 'ಬ್ರಹ್ಮನ್' ಶಕ್ತಿ. ಆತನ 'ವಾಕ್' ಶಕ್ತಿ. ಅವನ 'ದೃಷ್ಟಿ' ಶಕ್ತಿಯೇನೂ ಕಡಿಮೆ

ಯಲ್ಲ. ಅದರಲ್ಲೂ ಯುವಾ ಭಿಷಕ್-(ತರುಣ ವೈದ್ಯ)ಹಳ್ಳಿಗಳಿಗೆ ಬಂದನೆಂದರೆ ದೇವರು ಬಂದಂತೆ. ಆತನು ಕೈಯಲ್ಲಿ ರೋಗಕ್ಕೆ ಉಚಿತವಾದ ವನೌಷಧಿಯೊಂದನ್ನು ಹಿಡಿದು ರೋಗನಿವಾರಕ ಮಂತ್ರಗಳನ್ನು (ಭೈಷಜ್ಯಾನಿ) ಬಾಯಲ್ಲಿ ಉಚ್ಚರಿಸುತ್ತಾ, ರೋಗಿಯನ್ನು ದೃಷ್ಟಿಸಿ ನೋಡುತ್ತಾ ರೋಗವನ್ನು ಪರಿಹರಿಸ ಲೆತ್ನಿಸುವನು; ಕೆಲವು ವೇಳೆ ಔಷಧಿಯನ್ನು ಕುಡಿಸುವನು; ಇಲ್ಲವೇ ಅಂಗಾಗಗಳಿಗೆ ಲೇಪಿಸುವನು; ಅಂಜನೆಯ ಪ್ರಯೋಗ ಮಾಡುವನು; ಮಂತ್ರಪೂತಜಲ ಇಲ್ಲವೇ ಲವಣ ಮಿಶ್ರಿತ ಜಲವನ್ನು ಸಂದರ್ಭಕ್ಕೆ ತಕ್ಕಂತೆ ಪ್ರಯೋಗಿಸುವನು; ನಾನಾ ವಿಧವಾದ ವನೌಷಧಿಗಳ ತಾಯಿತಗಳನ್ನು ಕಟ್ಟುವನು. ಒಂದು ರೀತಿಯ ಒರಟು ಶಸ್ತ್ರಚಿಕಿತ್ಸೆಯೂ ರೂಢಿಯಲ್ಲಿತ್ತು. (ಪ್ರ ತೇ ಭಿನದ್ಮಿ ಮೇಹನಂ, ೧. ೩. ೭. ನಿನ್ನ ಗುಪ್ತಾಂಗವನ್ನು ಭೇದಿಸುವೆನು,-ಮೂತ್ರ ಮೋಚನಕ್ಕಾಗಿ. ಹಾಗೆಯೇ ಸುಖ ಪ್ರಸೂತಿಗಾಗಿ ೧. ೧೧. ೫. ವಿ ತೇ ಭಿನದ್ಮಿ ಮೇಹನಂ. ವಿ ಯೋನಿಂ ವಿ ಗವೀನಿಕೇ.- ನಿನ್ನ ಗುಪ್ತಾಂಗವನ್ನು ನಿನ್ನ ಯೋನಿಯನ್ನು, ಮೂತ್ರನಾಳಗಳನ್ನು ಭೇದಿಸುವೆನು). ರೋಗವು ಪೀಡೆ, ಪಿಶಾಚಿ ಮುಂತಾದ ದುಷ್ಟ ಶಕ್ತಿಗಳಿಂದ ಬಂದಿದೆಯೆಂದು ನಂಬಿಕೆಯುಂಟಾದರೆ 'ಯಾತು ಜಂಭನೀ' (ರಾಕ್ಷಸರ ನಾಶ) ಮಂತ್ರಗಳನ್ನು ಜಪಿಸುತ್ತಿದ್ದನು. ಸೊಳ್ಳೆ ಮುಂತಾದ ಕ್ರಿಮಿಗಳಿಂದ ಬಂದ ರೋಗವಾಗಿದ್ದರೆ 'ಮಶಕ ಜಂಭನೀ'.(ಕ್ರಿಮಿ ನಾಶಿನಿ) ಇತ್ಯಾದಿ ಮಂತ್ರಗಳು ಜಪಿಸಲ್ಪಡು ತ್ತಿದ್ದವು. ರೋಗಗಳ ಹೆಸರು, ಕುಲ, ಗೋತ್ರ ಇವುಗಳನ್ನು ತಿಳಿದರೇ ಸಾಕು ಅವುಗಳ ಅರ್ಧಶಕ್ತಿ ಉಡುಗಿದಂತೆಯೇ.

ರೋಗಿಗೆ ವ್ರೀಹಿ (ಅಕ್ಕಿ), ಯವ (ಬಾರ್ಲಿ) ಮುಂತಾದ

ಧಾನ್ಯಗಳ ಗಂಜಿ ಕುಡಿಸುತ್ತಿದ್ದರು. ಕೆಂಪು ಮಣ್ಣನ್ನು (ಸಾಮಾನ್ಯವಾಗಿ ಹುತ್ತದ ಮಣ್ಣು) ನೀರಿನಲ್ಲಿ ಕಲಸಿ ಪ್ರಯೋಗಿಸುತ್ತಿದ್ದರು. ಕೆಂಪಗೆ ಕಾದ ಕಬ್ಬಿಣವನ್ನು (ಪರಶು--ಕೊಡಲಿ-ಇತ್ಯಾದಿ) ನೀರಿನಲ್ಲಿ ಅದ್ದಿ ಆ ನೀರನ್ನು ಮೈಮೇಲೆ ಚಿಮುಕಿಸುವುದು ಇಲ್ಲವೇ ಕುಡಿಸುವುದು ರೂಢಿಯಲ್ಲಿತ್ತು.

**ಕೆಲವು ಮಂತ್ರಗಳು :** ಈ ರೀತಿ ರೋಗಗಳನ್ನು, ರೋಗಕ್ಕೆ ಕಾರಣಗಳಾದ ವಸ್ತು ಇಲ್ಲವೇ ವ್ಯಕ್ತಿಗಳನ್ನು ನಾಶಪಡಿಸಲು ಅಥರ್ವನ್ ಪುರೋಹಿತನು ಪ್ರಯತ್ನಿಸುತ್ತಿದ್ದನು. ಉದಾಹರಣೆಗಾಗಿ ಕೆಲವು ಮಂತ್ರಗಳನ್ನು ನೋಡೋಣ :—

ಈ ಕೆಳಗಿನ ಮಂತ್ರಭಾಗ ಮೂತ್ರ ಮೋಚನಕ್ಕೆ. ೧. ೩.

ಯದಾಂತ್ರೇಷು ಗವೀನ್ಯೋರ್ಯದ್ ಬಸ್ತಾವಧಿ ಸಂಶ್ರುತಮ್।
ಏವಾ ತೇ ಮೂತ್ರಂ ಮುಚ್ಯತಾಂ ಬಹಿರ್ಬಾಲಿತಿ
ಸರ್ವಕಮ್ ॥ ೧. ೩. ೬.

ಕರುಳಿನಲಿ, ನಾಳದಲಿ, ಯಾವುದೆಲ್ಲವು ಮತ್ತೆ ಕೋಶದಲ್ಲಿ
ಸೇರಿಕೊಂಡಿರ್ಪುದೋ ಆ ಮೂತ್ರ ಬಳ್ಕೆಂದು ಹೊರಬೀಳಲಿ.
೧, ೩. ೬.

ಪ್ರ ತೇ ಭಿನದ್ಮಿ ಮೇಹನಂ ವರ್ತ್ರಂ ವೇಶಂತ್ಯಾ ಇವ।
ಏವಾ ತೇ ಮೂತ್ರಂ ಮುಚ್ಯತಾಂ ಬಹಿರ್ಬಾಲಿತಿ
ಸರ್ವಕಮ್ ॥ ೧. ೩. ೭.

ಕೆರೆಯ ಏರಿಯನ್ನು ಒಡೆದು ನೀರು ಬಿಡುವ ರೀತಿಯಲ್ಲಿ ನಿನ್ನ ಮೂತ್ರ ಮಾರ್ಗವನ್ನು ಭೇದಿಸಿ ಮೂತ್ರವನ್ನು ಹೊರಬೀಳಿಸುವೆನು ಎಂದು ಹೇಳಿರುವುದು, ಇದಕ್ಕೆ ಕೌಶಿಕ ಸೂತ್ರದಲ್ಲಿ (ಅ. ವೇ. ದ ವೇದಾಂಗ ಸೂತ್ರ) ಲೋಹದ ತುಂಡೊಂದರಿಂದ

ಮೂತ್ರ ಮಾರ್ಗದ ಅಡಚಣೆಗಳನ್ನು ನಿವಾರಿಸಬೇಕೆಂದು ಸೂಚಿಸಿರುವುದನ್ನು ನೋಡಿದರೆ ಶಸ್ತ್ರ ಚಿಕಿತ್ಸೆಯ ಅಭಿಪ್ರಾಯ ಆಗಿನವರಿಗೆ ಗೊತ್ತಿತ್ತು ಎಂದು ಹೇಳದೆ ವಿಧಿಯಿಲ್ಲ.

ಅತಿಸಾರಕ್ಕೆ ವಿರುದ್ಧವಾಗಿ ಮತ್ತೊಂದು ಮಂತ್ರಭಾಗ.

೧. ೨. ೪.

ಯಥಾ ದ್ಯಾಂ ಚ ಪೃಥಿವೀಂ ಚಾನ್ತಸ್ತಿಷ್ಠತಿ ತೇಜನಮ್ ।
ಏವಾ ರೋಗಂ ಚಾಸ್ರಾವಂ ಚಾನ್ತಸ್ತಿಷ್ಠತು ಮುಂಜ ಇತ್ ॥

ಬಿಲ್ಲಿನಿಂದ ಬಾಣ (ತೇಜನ) ಬಿಟ್ಟಾಗಿದೆ. ಸುಯ್ಯೆಂಗುಟ್ಟುತ್ತಾ ಅದು ಓಡುತ್ತಿದೆ. ಆಗ ಅದು ದಿವಿ ಬುವಿಗಳ ಮಧ್ಯೆ ನಿಂತಂತೆ ತೋರುತ್ತದೆ. ಅದೇ ರೀತಿ ಅತಿಸಾರಕ್ಕೆ ಚಿಕಿತ್ಸೆಯಾಗಿ ಉಪಯೋಗಿಸಲ್ಪಡುವ 'ಮುಂಜ' ವೆಂಬ ವನೌಷಧಿಯು ರೋಗಿ-ರೋಗಗಳ ಮಧ್ಯೆ ಪ್ರವೇಶಿಸಿ ರೋಗವನ್ನು ನಿವಾರಿಸಬೇಕು.

ರೋಗಕ್ಕೆ ಜಲ ಪ್ರಸಿದ್ಧವಾದ ಮದ್ದೆಂದು ಪರಿಗಣಿಸಲ್ಪಟ್ಟಿತ್ತು. ಅದಕ್ಕೆ ಉಪ್ಪು ಜಿರಿಗೆ ಕಲಸಿ ರೋಗಿಗೆ-ಮನುಷ್ಯನಾಗಲೀ, ಪಶು, ಅಶ್ವ ಮುಂತಾದ ಪ್ರಾಣಿಗಳಾಗಲೀ-ಪ್ರಯೋಗಿಸುತ್ತಿದ್ದರು. ನೀರು ತಾಯಿಗೆ ಸಮಾನ(ಅಂಬಯೋ); ಅವರಲ್ಲಿ ಔಷಧಿ ಗುಣಗಳಿವೆ (ಅಪ್ಸು ಭೇಷಜಂ); ಅಮೃತವಿದೆ (ಅಪ್ಸ್ವಂತರಮೃತಂ); ಅದು ಅಶ್ವಗಳಿಗೆ, ಗೋವುಗಳಿಗೆ ಬಲಸಮೃದ್ಧಿ (ವಾಜೀಕರಣ) ಉಂಟುಮಾಡುತ್ತದೆ. ಹೆಚ್ಚೇಕೆ, ಇಲ್ಲಿ ಕೇಳಿ :—

ಅಪ್ಸು ಮೇ ಸೋಮೋ ಅಬ್ರವೀದಂತರ್ವಿಶ್ವಾನಿ ಭೇಷಜಾ ।
ಅಗ್ನಿಂ ಚ ವಿಶ್ವಶಂಭುವಮ್ ॥ ೧. ೬. ೨.

“ ಜಲದಲ್ಲಿ ”–ಪೇಳಿದನು ಸೋಮನೆನಗೆ –
“ ವಿಶ್ವಭೇಷಜವನಿತು ನೆಲೆಸಿರ್ಪವೆಂದು ;
ವಿಶ್ವಶಾಂತಿಯನೀವ ಅಗ್ನಿಯಿಹನೆಂದು ”.

ಮೂಳೆ ಮುರಿದರೆ ರೋಹಿಣೀ ಅಥವಾ ಅರುಂಧತೀ ಎಂಬ ವನೌಷಧಿಯನ್ನು ಪ್ರಯೋಗಿಸಿ ಮೂಳೆಗೆ ಮೂಳೆ, ಮಾಂಸಕ್ಕೆ ಮಾಂಸ, ಮಜ್ಜೆಗೆ ಮಜ್ಜೆ, ಚರ್ಮಕ್ಕೆ ಚರ್ಮ ಸೇರಿಕೊಳ್ಳಬೇಕೆಂದು ಅಥರ್ವವೇದದ ‘ಬ್ರಹ್ಮನ್’ ಪುರೋಹಿತನು ಪ್ರಾರ್ಥಿಸುವನು. ಅವನ ನುಡಿಗಳನ್ನೇ ಕೇಳಿ :—

ರೋಹಿಣಿಯು ನೀನೆಲಾ, ಛಿನ್ನಾಸ್ಥಿ ರೋಹಣಿಯು,
ಇದನರುಂಧತಿ, ನೀನು ಬೆಳೆಸಬೇಕೌ ! ೪. ೧೨.೧.

ರೋಗಿಯನ್ನು ದೃಷ್ಟಿಸಿ :

ಮಜ್ಜೆಯೊಡೆ ಮಜ್ಜೆ ಸೇರಲಿ ನಿನ್ನ
ಚರ್ಮದೊಡೆ ಚರ್ಮ ಬೆಳೆಗೆ !
ಬೆಳೆಯಲ್ಕೆ ರಕ್ತ ಮೂಳೆಯು ನಿನ್ನ
ಮಾಂಸದೊಡೆ ಮಾಂಸ ಬೆಳೆಗೆ ! ೪. ೧೨. ೪.

ಔಷಧಿಯನ್ನು ದೃಷ್ಟಿಸಿ :

ರೋಮವನು ಕೂಡಿಸೌ ರೋಮದೊಡೆ ನೀನು !
ಚರ್ಮದೊಡೆ ಚರ್ಮವನ್ನು!

ರೋಗಿಯ ಕಡೆ ತಿರುಗಿ :

ನಿನ್ನ ರಕ್ತವು ಮೂಳೆ ಬೆಳೆಯಲ್ಕೆ ;

ಔಷಧಿಯನ್ನು ನೋಡಿ :

ಔಷಧಿಯೆ,
ಮುರಿದುದನು ನೀಂ ಕೂಡಿಸೌ ! ೪. ೧೨. ೫.

ರೋಗಿಯನ್ನು ನಿಟ್ಟಿಸಿ ನೋಡಿ:

ಮೇಲೇಳು! ಏಳು ನೀಂ! ದೂರ ಪೋ, ಓಡೋಡು!
ಗಟ್ಟಿ ಗುಂಬವ ಮತ್ತು ಪಟ್ಟಿಗಳ ಹೊಂದಿರ್ಪ
ಸಚ್ಚಕ್ರ ರಥದಂತೆ ನಿಮಿರಿ ನಿಲ್ಲು! ೪. ೧೨. ೬.

ಚಿಂತಿಸಿ:

ಹಳ್ಳದೆ ಬಿದ್ದು ಆಯಿತೊ ಏನೋ!
ಹೊಡೆದಾ ಕಲ್ಲಿನ ಏಟೋ ಏನೋ!
'ಋಭು'ಗಳು ತೇರನು ಕೂಡಿಸುವಂತೆ
ಸಂದಿಗೆ ಸಂದನು ಸೇರಿಸಲಿ! ೪. ೧೨. ೭.

ದೇವತೆಗಳ ಬಡಗಿ "ಋಭುಸ್ಸು" ತೇರಿನ ಅಚ್ಚನ್ನು ಸೇರಿಸುವಂತೆ ಈ ರೋಹಿಣೀ ವನೌಷಧಿ ಮೂಳೆ ಮುರಿದ ಮಾನವ-ರಥವನ್ನು ಸುಸ್ಥಿತವಾದದ್ದನ್ನಾಗಿ ಮಾಡಬೇಕು.

ಇದೇ ರೀತಿ ಯಕ್ಷ್ಮನಾಶನಕ್ಕೆ, ಕುಷ್ಠನಾಶನಕ್ಕೆ, ತಕ್ಮನ್ ನಾಶಕ್ಕೆ, ವಿಷನಾಶನಕ್ಕೆ, ಹೃದ್ರೋಗ, ಕಾಮಿಲಾ, (ಕಾಮಾಲೆ) ಅಕ್ಷಿರೋಗ (ಕಣ್ಣುಬೇನೆ), ಆಗರ್ಭರೋಗಗಳು, (ಕ್ಷೇತ್ರಿಯ) ಮುಂತಾದುವುಗಳ ನಿವಾರಣೆಗೆ, ಬಲಪ್ರಾಪ್ತಿ, ದೀರ್ಘಾಯು ಪ್ರಾಪ್ತಿಗೆ, ಕೇಶಸಂವರ್ಧನಕ್ಕೆ, ಕೆಟ್ಟಕನಸುಗಳು, ಹುಚ್ಚು ಮುಂತಾದುವುಗಳಿಗೆ, ಕಡೆಗೆ ಮೃತ್ಯು ಸಂತರಣಕ್ಕೆ ಕೂಡ ಮಂತ್ರಗಳಿವೆ.

**ಕೆಲವು ವನೌಷಧಿಗಳು ಮತ್ತು ಅವುಗಳ ಉಪಯೋಗ:**

ಮೇಲೆ ಹೇಳಿದ ವಿವಿಧ ರೋಗಗಳಿಗೆ ಉಚಿತ ಮಂತ್ರೋಚ್ಚಾರಣೆಯ ಜತೆಗೆ ಸಂಬಂಧಪಟ್ಟ ವನೌಷಧಿಗಳನ್ನು ಉಪಯೋಗಿಸುತ್ತಿದ್ದರೆಂಬುದನ್ನು ನಾವು ಈಗಾಗಲೇ ತಿಳಿದಿ

ವ್ವೇಪೆ. ಕೆಲವು ವನೌಷಧಿಗಳ ಹೆಸರನ್ನು ಗಮನಿಸಿ! ಹೆಚ್ಚು ಕಡಿಮೆ ಇವುಗಳೆಲ್ಲಕ್ಕೂ ಆಧುನಿಕ ಸಸ್ಯಶಾಸ್ತ್ರದ ಹೆಸರನ್ನು ಕೊಡಬಹುದಾದರೂ ವಿಸ್ತಾರ ಭಯದಿಂದ ಇಲ್ಲಿ ಬಿಡಲಾಗಿದೆ:—

೧. ಶರ (ಮುಂಜ). ಅತಿಸಾರ, ಮೂತ್ರ ಮೋಚನ, ಮೂತ್ರನಿಯಮನಗಳಿಗೆ.

೨. ಅಸಿಕ್ನೀ (ನೀಲೀ). ಶ್ವೇತಕುಷ್ಠಕ್ಕೆ.

೩. ಆಸುರೀ (ಶ್ಯಾಮಾ). ಕೆಮ್ಮು, ಬೊಬ್ಬೆಗಳು ಮತ್ತು ಚರ್ಮರೋಗಗಳಿಗೆ.

೪. ಪಲಾಶ. (ಸಾಯಣ-ಪಲಾಶ ಎನ್ನುವನು). ಬಹುಶಃ ಕೆಮ್ಮು, ಕ್ಷಯ ಇತ್ಯಾದಿಗಳಿಗೆ.

೫. ಆಬಯು (ಸಾಸಿವೆ). ಕಣ್ಣುಬೇನೆಗಳಿಗೆ.

೬. ಶಮೀ. ಕೇಶನಾಶನಕ್ಕೆ.

೭. ಪುತುದ್ರು. ಗಂಡೌಷಧಿ ಇದ್ದಂತೆ ಎಲ್ಲದಕ್ಕೂ.

೮. ಜೀವನ್ತೀ.

೯. ಜೀವಲಾ.

೧೦. ಕಣ್ವ. (ಒಂದುಬಳ್ಳಿ) ಸಕಲರೋಗಗಳಿಗೂ.

೧೧. ಮಧುಃ (ಮಧೂಲಕ, ಮಧೂಕ): ವಶೀಕರಣಕ್ಕೆ, ಪ್ರಸನ್ನತೆಗೆ.

೧೨. ಮಧುಲಾ. ವಿಷಪರಿಹಾರಕ್ಕೆ.

೧೩. ಯವ; (ಬಾರ್ಲಿ).

೧೪. ತಿಲ (ಎಳ್ಳು).

೧೫. ಅರ್ಜುನಕಾಂಡ. (ಅರ್ಜುನವೃಕ್ಷ). ಕ್ಷೇತ್ರಿಯ ರೋಗಗಳಿಗೆ.

೧೬. ಸಹಸ್ರಕಾಂಡ. (ಬಿಳಿಯ ದೂರ್ವಾ) ಶಾಪಕ್ಕೆ ವಿರುದ್ಧವಾಗಿ.

೧೭. ಪೃಶ್ನಿಪರ್ಣೀ: ಬೆಂಕಿಜ್ವರ, ದೈನಂದಿನಜ್ವರ, ಆಮಶಂಕೆ ಇತ್ಯಾದಿಗಳಿಗೆ.

೧೮. ಪಾಟಾ: ವೈರಿದಮನಕ್ಕೆ.

೧೯. ವರಣ. (ವರಣಾವತೀ). ಯಕ್ಷ್ಮನಿವಾರಣೆಗೆ. ತಾಯಿತಗಳಿಗೆ.

೨೦. ಮಾದವತೀ—ವಿಷನಾಶನಕ್ಕೆ.

೨೧. ರೋಹಿಣೀ: (ರೋಹಣೀ, ಅರುಂಧತೀ) ರಕ್ತವೃದ್ಧಿಗೆ, ಮೂಳೆಗಳನ್ನು ಬೆಳೆಸಲು. ಮೂಳೆ ಮುರಿತ ಇತ್ಯಾದಿಗಳಿಗೂ ಸಹ.

೨೨. ಅಪಾಮಾರ್ಗ.—ರೋಗಗಳ, ದೆವ್ವಗಳ ವಿರುದ್ಧವಾಗಿ.

೨೩. ಸದಂಪುಷ್ಪಾ.—ತಾಯಿತಗಳಿಗಾಗಿ: ಇವರಿಂದ ಏನು ಬೇಕಾದರೂ ಕಾಣುತ್ತದೆ; ಮುಖ್ಯವಾಗಿ—ದೆವ್ವ, ಪೀಡೆ ಪಿಶಾಚಿಗಳು ಕಾಣುತ್ತವೆ.

೨೪. ಅಜಶೃಂಗೀ—ದೆವ್ವ, ಪೀಡೆಗಳು, ಮೋಹಿನಿಗಳ ವಿರುದ್ಧವಾಗಿ.

೨೫. ಕುಷ್ಠ. (ನಘಮಾರ, ನಘಾರಿಷ). ಜ್ವರಕ್ಕೆ, ಕ್ಷಯಕ್ಕೆ, ನೋವುಗಳಿಗೆ. ವಶೀಕರಣಕ್ಕೆ, ತಾಯಿತಗಳಿಗೆ.

೨೬. ಲಾಕ್ಷಾ, (ಒಂದು ಬಳ್ಳಿ) ಏಟುಗಳ ಗಾಯಕ್ಕೆ, ಬಾಣಗಳ ಏಟಿಗೆ, ಸುಟ್ಟ ಗಾಯಗಳಿಗೆ.

೨೭. ಪಿಪ್ಪಲಿ. ಗಾಯಗಳಿಗೆ. ಉದರವಾಯುಗಳಿಗೆ, ಅಜೀರ್ಣಕ್ಕೆ.

೨೮. ಚಿಪುದ್ರು. ಕೀವುಕಟ್ಟುವುದು, ಶ್ಲೇಷ್ಮ, ರಕ್ತಸ್ರಾವ, ಯಕ್ಷ್ಮ ಇತ್ಯಾದಿಗಳಿಗೆ.

೨೯. ನಿತತ್ನೀ. ಕೇಶವರ್ಧನಕ್ಕೆ.

೩೦. ನ್ಯಸ್ತಿಕಾ. ಕಾಮಪ್ರಚೋದನೆ ಮತ್ತು ವಶೀಕರಣಕ್ಕೆ.

೩೧. ತುಷ್ಟಿಕಾ. (ಬಾಣಾಪರ್ಣಿ) ಸಪತ್ನೀ ಮರ್ದನಕ್ಕೆ.

೩೨. ಗುಗ್ಗುಲ. ಯಕ್ಷ್ಮರೋಗಕ್ಕೆ. ಗಾಯಗಳಿಗೆ.

೩೩. ವ್ರೀಹಿ (ಭತ್ತ-ಅಕ್ಕಿ). ಯಕ್ಷ್ಮದ ವಿರುದ್ಧ ಮಾಡುವ ಪ್ರತಿ ಚಿಕಿತ್ಸೆಗಳಿಗೆ.

೩೪. ಬಜ. ಪಿಶಾಚಿನಾಶಕ್ಕೆ (ಗರ್ಭಿಣಿಯರಿಗೆ ತೊಂದರೆ ಕೊಡುತ್ತವೆ). ಗರ್ಭಿಣಿಯರು ಇಟ್ಟುಕೊಂಡಿರಬೇಕು.

೩೫. ಪರ್ಣ. (ಪಲಾಶ) ತಾಯಿತಗಳಿಗೆ.

೩೬. ಸ್ರಕ್ತ್ಯ—ತಾಯಿತಗಳಿಗೆ. ಮಾಟಕ್ಕೆ ವಿರುದ್ಧವಾಗಿ.

೩೭. ದರ್ಭೆ. ತಾಯಿತಗಳಿಗೆ.

೩೮. ಶತವಾರ. ತಾಯಿತಗಳಿಗೆ. ಚರ್ಮರೋಗಗಳಿಗೆ.

೩೯. ಅಸ್ತೃತ. ತಾಯಿತಗಳಿಗೆ.

೪೦. ಅರ್ಕ. ಒಂದು ಬಗೆಯ ಮೇಣ. ತಾಯಿತಗಳಿಗೆ.

೪೧. ಉತ್ತಾನ ಪರ್ಣ. ಸವತಿಯ ಮರ್ದನಕ್ಕೆ.

೪೨. ಅಶ್ವತ್ಥ. (ಅರಳಿ). ಅಗ್ನಿಮಂಥನಕ್ಕೆ.

೪೩. ಔದುಂಬರ. ತಾಯಿತಗಳಿಗೆ. ಸಂಪದಭಿವೃದ್ಧಿಗೆ. ವಶೀಕರಣಕ್ಕೆ.

೪೪. ಜಂಗಿಡ. ತಾಯಿತಗಳಿಗೆ. ಜ್ವರಗಳಿಗೆ, ನೋವುಗಳಿಗೆ.

೪೫. ಖದಿರ.

ಇದೇ ರೀತಿ ತ್ರಿಸಂಧ್ಯಾ, ಸಹದೇವೀ, ವಿಷಾ, ವಿಷಾಟಕೀ, ತಿಲಕ, ಕಾಶ, ಮುಸಲ, ಕೃಕಟಕ, ಶ್ಲೇಷ್ಮಾಂತಿಕ, ಏರಂಡ, ತಾರ್ಷ್‍ಟ್‍ಘ್ನೀ, ಶಾಕ, ಉಶೀರಾ, ಕಾಂಪಿಲ್ಯ, ಬಧಕ, ಭಾಂಗ (ಇಂಗಿಡ), ರಾಜನೀ, ಖಲುಪರ್ಣೀ, ಆಂಡಿಕ, ವಿಹಲ್ಲ, ಅಲಸಾಲಾ, ಸಿಲಂಜಾಲಾ, ತಲಾಷಾ, ವೇತಸೀ, ತಾಬುವ, ತಸ್ತುವ, ಅಮೂಲಾ, ನಾರಾಚೀ, ಶಿಲಾಚೀ ಇತ್ಯಾದಿ ನಾನಾ ವರ್ಣದ,ವಿವಿಧ ವಾಸನೆಯ, ಬಗೆಬಗೆಯ ಗುಣಗಳ, ಪರ್ವತಗಳ ಮೇಲೆ, ಮೈದಾನದಲ್ಲಿ, ನೀರಿನಲ್ಲಿ ಬೆಳೆಯುವ ವನೌಷಧಿ ಗಳನ್ನು ಉಪಯೋಗಿಸುತ್ತಿದ್ದರು. ಅವುಗಳ ರೂಪ, ರಸ, ಗಂಧ, ಹೋಗಲಾಡಿಸುವ ರೋಗ ಮುಂತಾದುವುಗಳ ಆಧಾರದ ಮೇಲೆ ಅವರು ಹೆಸರುಗಳನ್ನು ಕೊಟ್ಟಿರುವರೆಂಬುದನ್ನು ನಾವಿಲ್ಲಿ ಸುಲಭವಾಗಿ ಊಹಿಸಬಹುದು.

ಅಥರ್ವ ವೇದದ ಆರ್ಯರು ಮುಂಗುಸಿ ನೆಲ ಬಗೆಯುವಾಗ ಕೆಲವು ವನೌಷಧಿಗಳನ್ನರಿತರು. ಕಾಡು ಹಂದಿ ನೆಲ ಊಟು ವಾಗ ಮತ್ತೆ ಕೆಲವನ್ನು ನೋಡಿ ತಿಳಿದರು. ಅನಾರ್ಯರಾದ ಅಸುರರಿಂದ ಮತ್ತೆ ಕೆಲವನ್ನು ನೋಡಿ ತಿಳಿದುಕೊಂಡರು. ವನೌಷಧಿಗಳ ಬಣ್ಣ, ವಾಸನೆ, ರುಚಿ, ಎಲೆಗಳ ಆಕಾರ ಇತ್ಯಾದಿ ವಿಷಯಗಳನ್ನು ಪರಿಶೀಲಿಸಿ ಸಸ್ಯಶಾಸ್ತ್ರದಲ್ಲೂ ತಕ್ಕಮಟ್ಟಿನ ಜ್ಞಾನ ಸಂಪಾದನೆ ಮಾಡಿದ್ದರು.

ವಿಷಜಂತು ವಿಷಯಕ ಜ್ಞಾನವಂತೂ ಅತ್ಯಾಧುನಿಕವೆನ್ನು ವಷ್ಟು ಅವರಿಗಿತ್ತು. ಹಾವುಗಳು, ಚೇಳುಗಳು, ಕ್ರಿಮಿಕೀಟ ಗಳ ಆಕಾರ, ಬಣ್ಣ ಮುಂತಾದುವುಗಳನ್ನು ಪರೀಕ್ಷಿಸಿ ಅದಕ್ಕೆ ತಕ್ಕಂತೆ ಹೆಸರುಗಳನ್ನಿಟ್ಟಿರು.

ಹಾವುಗಳ ವೈವಿಧ್ಯತೆಯನ್ನು ನೋಡಿ:

೧. ಕೈರಾತ—ಕಿರಾತರೆಂಬ ಕಾಡುಜನರಿರುವ ಕಾಡಿನ ಹಾವು.

೨. ಪೃಶ್ನಿ—ಗೋಧಿಬಣ್ಣದ್ದು. ಈಗ ನಮಗೆ ಗೊತ್ತಿರುವ ಗೋಧಿನಾಗರಿನಂತೆ.

೩. ಉಪತೃಣ್ಯ—ಹುಲ್ಲಿನಲ್ಲಿರುವುದು. ಹಸುರುಬಣ್ಣದ್ದು.

೪. ಬಭ್ರು—ಮಚ್ಚೆಮಚ್ಚೆ ಇರುವುದು. (ಮಂಡಲದ ಹಾವು ದಾಸರಹಾವಿನಂತೆ).

೫. ಅಸಿತ—ಕಪ್ಪುಬಣ್ಣದ್ದು (ಕಾಳಿಂಗ ನಾಗರ ಹಾವಿನಂತೆ).

೬. ಅಪೋದಕ—ನೀರ ಹೊರಗಡೆ ಮಾತ್ರ ಇರುವುದು.

೭. ತೈಮೂತ.

೮. ಅಲಿಗೀ.

೯. ವಿಲಿಗೀ.

೧೦. ಉರುಗೂಲಾ.

೧೧. ಪೃದಾಕು—ಘಟಸರ್ಪ.

೧೨. ತಿರಶ್ಚಿರಾಜಿ—ಅಡ್ಡಡ್ಡ ಗೀಟಿರುವುದು—(ಕಟ್ಟಿನಹಾವಿನಂತೆ.)

೧೩. ಕಂಕಪರ್ವನ್ (ನೀರುಕೋಳಿಯ ಕಾಲಿನಂತೆ ಗಿಣ್ಣು ಗಿಣ್ಣು ಇರುವುದು.)

ಬಾಯಿ ಬಾಲಗಳೆರಡರಲ್ಲೂ ಕಚ್ಚಿ, ಬಾಯಲ್ಲಿ ವಿಷವಿಲ್ಲದೆ ಬಾಲದಲ್ಲಿ ವಿಷವಿರುವ ಶರ್ಕೋಟ (Scorpion) ವನ್ನು ನೋಡಿಯಂತೂ ಅವರಿಗೆ ಅಚ್ಚರಿಯೋ ಅಚ್ಚರಿ! ಭಯವೂ ಜತೆಗೆ!

ನ ತೇ ಬಾಹ್ವೋರ್ಬಲಮಸ್ತಿ ನ ಶೀರ್ಷೇ ನೋತ ಮಧ್ಯತಃ।
ಅಥ ಕಿಂ ಪಾಪಯಾಮುಯಾ ಪುಚ್ಛೇ ಬಿಭರ್ಷ್ಯರ್ಭಕಮ್ ॥

೭,೫೬.೬

ನಿನ್ನ ಬಾಹುಗಳಲ್ಲಿ ಬಲವೆಂಬುದಿಲ್ಲ!
ಶಿರದಲ್ಲು ತಾನಿಲ್ಲ! ಸೊಂಟದಲು ಇಲ್ಲ!
ಆದರೂ ಪಾಪದಿಂ ಈ ಪುಚ್ಛದಲ್ಲಿ
ತುಚ್ಛ ವಿಷವೊಂದನ್ನು ಹೊತ್ತಿರುವೆಯಲ್ಲ!

ಯ ಉಭಾಭ್ಯಾಂ ಪ್ರಹರಸಿ ಪುಚ್ಛೇನ ಚಾಸ್ಯೇನ ಚ।
ಆಸ್ಯೇ ನ ತೇ ವಿಷಂ ಕಿಮು ತೇ ಪುಚ್ಛಧಾವಸತ್ ॥ ೭.೫೦.೮

ಎರಡರಿಂ ಕುಟುಕುತ್ತಲಿರುತಿರುವೆ ನೀನು!
ಬಾಲದಿಂ ಮತ್ತುಮಾ ಬಾಯಿಯಿಂದ!
ಬಾಯಲ್ಲಿ ನಿನಗಿನ್ನು ವಿಷವೆಂಬುದಿಲ್ಲ!
ಬಾಲದಲಿ ಅದು ನಿನಗೆ ಬಂದುದೆಲ್ಲಿಂದ?

ತಾವು ಬೆಳೆಯುತ್ತಿದ್ದ ವ್ರೀಹಿ (ಭತ್ತ) ಯವ (ಜವೆಗೋಧಿ) ಮುಂತಾದ ಬೆಳೆಗಳಿಗೆ ಹಾನಿ ಉಂಟುಮಾಡುತ್ತಿದ್ದ ಕ್ರಿಮಿಕೀಟಗಳ ನಾಶಕ್ಕೂ ಸಹ ತಮ್ಮ ಶಕ್ತಿಗೆ ಸಾಧ್ಯವಾದ ಚಿಕಿತ್ಸೆಗಳನ್ನು ಮಾಡುತ್ತಿದ್ದರು ಅಥರ್ವವೇದದ ಕಾಲದ ರೈತರು. ತುಂಬಾ ಹಾನಿಯನ್ನುಂಟುಮಾಡುತ್ತಿದ್ದ ಕೆಲವು ಪ್ರಾಣಿಗಳು ಇವು:

೧. ಸಾರಂಗ–ಬಣ್ಣ ಬಣ್ಣದ ಪ್ರಾಣಿಯೊಂದು. ಕೀಟವೂ ಆಗಬಹುದು.
೨. ಅರ್ಜುನ–ಬಿಳುಪುಬಣ್ಣದ ಪ್ರಾಣಿವಿಶೇಷ.
೩. ಚತುರಕ್ಷ–ನಾಲ್ಕು ಕಣ್ಣಿನ ಕೀಟವೊಂದು.
೪. ಅಧ್ವರ–ಕೊರೆಯುವ ಕ್ರಿಮಿ.

ಹೀಗೆಯೇ ಅವಸ್ಕವ, ಶಲೂನಸ್, ಅಲಾಂಡುಸ್, ಕುರೂರು ಇವೆಲ್ಲವು ಬಗೆಬಗೆಯ ಕ್ರಿಮಿ ಕೀಟಗಳು. ಅವುಗಳಿಗೂ ರಾಜ, ರಾಣಿ, ಯಜಮಾನ ಎಲ್ಲಾ ಉಂಟು. ಮಶಕಗಳ (Mosquito) ಕಾಟವಂತೂ ಹೆಚ್ಚಾಗಿತ್ತೆಂದು ನಮಗೆ 'ಮಶಕ ಜಂಭನೀ' ಸೂಕ್ತಗಳು ಹೇಳುತ್ತವೆ.

## ಅಥರ್ವವೇದ ಭಾರತೀಯರ ಮೊಟ್ಟಮೊದಲಿನ ವಿಜ್ಞಾನಗ್ರಂಥ :—

ಅಥರ್ವವೇದವು ಭಾರತೀಯ ವೈದ್ಯವಿಜ್ಞಾನಕ್ಕೆ ಮೊಟ್ಟ ಮೊದಲಿನ ಉದ್ಗ್ರಂಥ. ಭಾರತದಲ್ಲಿ ವಿಜ್ಞಾನದ ಬೆಳವಣಿಗೆಗೆ ಅಥರ್ವವೇದವೇ ನಾಂದಿಯಾಯಿತು. ಈ ಭದ್ರ ಬುನಾದಿಯ ಮೇಲೆಯೇ ಆಯುರ್ವೇದ ವಿಜ್ಞಾನ, 'ಮಾಟ' ಜ್ಞಾನ, ಕಾಮ ಶಾಸ್ತ್ರ, ರಾಜನೀತಿ ಶಾಸ್ತ್ರ, ಸಮಾಜ ಶಾಸ್ತ್ರ, (ಗೃಹ್ಯ ಸೂತ್ರಗಳು) ಮುಂತಾದ ಶಾಸ್ತ್ರಗಳು ಬೆಳೆದವು. ಚರಕ, ಸುಶ್ರುತ ಮುಂತಾದ ಆಯುರ್ವೇದ ವಿಜ್ಞಾನಿಗಳು ತಮ್ಮ ಭವ್ಯಗ್ರಂಥಗಳಿಗೆ ರೂಪು ಕೊಟ್ಟುದು ಅಥರ್ವ ವೇದದ ಆಧಾರ ದಿಂದ. ಅಥರ್ವವೇದದ ಆರ್ಯರು ತಮ್ಮ ಬದುಕನ್ನು ನೀರೋಗಮಯವಾಗಿ, ಆನಂದಮಯವಾಗಿ, ಕಲ್ಯಾಣಮಯ ವಾಗಿ ಮಾಡಿಕೊಂಡುದಲ್ಲದೆ ತಮ್ಮನ್ನು ನಂಬಿದ್ದ ಪಶು ಪ್ರಾಣಿ ಗಳನ್ನು ಸಹ ಸುಸ್ಥಿತಿಯಲ್ಲಿಟ್ಟಿರಲು ಹವಣಿಸುತ್ತಿದ್ದರು.

ಜಿಹ್ವೆಯಲ್ಲಿ ವಾಕ್‌ಶಕ್ತಿ, ನಸದಲ್ಲಿ ಪ್ರಾಣ, ಕರ್ಣಗಳಿಗೆ ಶ್ರವಣಶಕ್ತಿ, ನೆರೆಯದಕೂದಲು, ರಕ್ತಸುರಿಯದ ಹಲ್ಲುಗಳು (ಅಶೋಣಾ ದಂತಾಃ), ಬಾಹುಗಳಿಗೆ ಬಲ, ತೊಡೆಗಳಿಗೆ (ಊರು) ಓಜಸ್ಸು, ಜಂಘೆಗಳಿಗೆ ವೇಗ (ಜವ), ಪಾದಗಳಲ್ಲಿ

ಸುಸ್ಥಿತಿ (ಪ್ರತಿಷ್ಠಾ) ಮುಂತಾದುವುಗಳನ್ನು ಆ 'ಬ್ರಹ್ಮ'ನು ಕರುಣಿಸಿ (೧೯-೬೦)

ಪಶ್ಯೇಮ ಶರದಃ ಶತಮ್ || ಜೀವೇಮ ಶರದಃ ಶತಮ್ ||
ಬುಧ್ಯೇಮ ಶರದಃ ಶತಮ್ || ರೋಹೇಮ ಶರದಃ ಶತಮ್ ||
ಪೂಷೇಮ ಶರದಃ ಶತಮ್ || ಭವೇಮ ಶರದಃ ಶತಮ್ ||
ಭೂಯೇಮ ಶರದಃ ಶತಮ್ || ಭೂಯಸೀಃ ಶರದಃ ಶತಾತ್|| ೧೯.೯೭.

ಎಂಬುದೇ ಅಥರ್ವವೇದದ ಆರ್ಯರ ಅನುದಿನದ ಪ್ರಾರ್ಥನೆಯಾಗಿತ್ತು.

### ೩. ಅಥರ್ವವೇದದಲ್ಲಿ ಮಾಟ.

ಈ ಮೊದಲು ಅಥರ್ವ ವೇದಕ್ಕೆ 'ಅಥರ್ವಾಂಗಿರಸ' ಎಂಬ ಹೆಸರೂ ರೂಢಿಯಲ್ಲಿದೆಯೆಂದು ಹೇಳಿದ್ದಾಗಿದೆ. 'ಅಥರ್ವಾಂಗಿರಸ' ವೆಂಬುದನ್ನು 'ಅಥರ್ವನ್' ಮತ್ತು 'ಆಂಗಿರಸ' ಎಂದು ಎರಡಾಗಿ ವಿಭಜಿಸಿ-ಅಥರ್ವನ್ ಎಂದರೆ ಶುಕ್ಲೇಂದ್ರ ಜಾಲ, (White Magic) ಆಂಗಿರಸವೆಂದರೆ 'ಕೃಷ್ಣೇಂದ್ರ ಜಾಲ' (Black Magic) ಎಂದು ಬ್ಲೂಂ ಫೀಲ್ಡ್ ಮುಂತಾದ ಪಾಶ್ಚಾತ್ಯ ವೈದಿಕ ಪಂಡಿತರು ಅರ್ಥ ಕಲ್ಪಿಸಿದ್ದಾರೆ. ಇದನ್ನೇ ವಿಂತರ್ ನಿತ್ಸ್, ವ್ಹಿಟ್‌ನೆ ಮುಂತಾದ ಪಂಡಿತರೂ ಒಪ್ಪಿದ್ದಾರೆ. ಇದು ಬಹುಮಟ್ಟಿಗೆ ನಿಜವಾದರೂ ಆಂಗಿರಸದಿಂದ ಶುಕ್ಲೇಂದ್ರ ಜಾಲ ಮಂತ್ರಗಳೂ, ಆಥರ್ವಣರಿಂದ ಕೃಷ್ಣೇಂದ್ರಜಾಲ ಮಂತ್ರಗಳೂ ಇರುವುದರಿಂದ ಇದನ್ನು ಅಕ್ಷರಶಃ ಸರಿಯೆಂದು ಒಪ್ಪಲಾಗುವುದಿಲ್ಲ.

**ಆಭಿಚಾರಿಕಾಣಿ:—ಶುಕ್ಲೇಂದ್ರಜಾಲ:** ಅಥರ್ವವೇದದಲ್ಲಿ 'ಆಭಿಚಾರಿಕಾಣಿ' ಎಂಬ ಹಲವಾರು ಸೂಕ್ತಗಳಿವೆ. ಇವುಗಳನ್ನು ಇಬ್ಬಗೆಯಾಗಿ ವಿಂಗಡಿಸಬಹುದು. ಮೊದಲನೆಯದು ಆತ್ಮರಕ್ಷಣೆಗೆ. ಇದರಲ್ಲಿ ಇಂದ್ರ, ಅಗ್ನಿ, ವರುಣ, ಮಿತ್ರ, ಪೂಷನ್, ರುದ್ರ, ದ್ಯಾವಾಪೃಥಿವೀ ಇತ್ಯಾದಿ ದೇವತೆಗಳನ್ನು ದೀರ್ಘಾಯುಸ್ಸು, ಧಾನ್ಯಸಮೃದ್ಧಿ, ನಿರಾಮಯತ್ವ, ಸತ್ಪುತ್ರರು, ಪಶುಪ್ರಾಣಿ ಸಮೃದ್ಧಿ ಇತ್ಯಾದಿ ಸದುದ್ದೇಶದಿಂದ ಇತರರಿಗೆ-ಜ್ಞಾತಿಗಳಿಗೂ ಕೂಡ-ಹಾನಿ ಬಯಸದೆ, ಹಾನಿ ಎಸಗದೆ ಉಪಯೋಗಿಸಲ್ಪಡುತ್ತಿದ್ದ ಮಂತ್ರಗಳು. ಕಾಲಕಾಲಕ್ಕೆ ಮಳೆ ಬೀಳಲು ಪ್ರಾರ್ಥಿಸುವ ಮಂತ್ರ, ಹೊನ್ನಾರು ಕಟ್ಟುವಾಗ ಹೇಳುವ ಮಂತ್ರ, ಸುಗ್ಗಿಯ ಮಂತ್ರ, ಹೊಸಮನೆ ಪ್ರವೇಶಕ್ಕೆ, ಹೊಸ ಕಾಲುವೆ ತೋಡಿದಾಗ, ಪ್ರಯಾಣದಲ್ಲಿ ಶುಭವಾಗಲು, ವಾಣಿಜ್ಯದಲ್ಲಿ ಲಾಭ ಬರಲು, ಹಸುಗಳು ಕಾಲಕ್ಕೆ ಸರಿಯಾಗಿ ಮನೆಗೆ ಹಿಂತಿರುಗಲು, ಕಳೆದುಹೋದ ವಸ್ತು ಮತ್ತೆ ಸಿಗಲು, ಅತಿಥಿ ಸತ್ಕಾರಕ್ಕೆ, ಗಂಡು ಮಗುವೇ ಹುಟ್ಟಲು, ಋಣ ಪರಿಹಾರಕ್ಕೆ, ಪಾಪ ಪರಿಹಾರಕ್ಕೆ, ಸಿಡಿಲು ಇತ್ಯಾದಿ ಪ್ರಕೃತಿಯ ಪ್ರಕೋಪಕ್ಕೆ, ವೈದಿಕ ಜ್ಞಾನಕ್ಕೆ, ಮೇಧಾಶಕ್ತಿ ವರ್ಧನಕ್ಕೆ ಹೀಗೆ ನಾನಾ ಉದ್ದೇಶಕ್ಕೆ ಮಂತ್ರಗಳು ಉಪಯೋಗಿಸಲ್ಪಡುತ್ತಿದ್ದುವು. ಇವೆಲ್ಲವೂ ಇತರರಿಗೆ ಹಾನಿ ಬಯಸದೆ ಆತ್ಮಹಿತ ಸಂಪಾದನೆಯ ಉದ್ದೇಶವನ್ನು ಹೊಂದಿವೆ. ಆತ್ಮ ರಕ್ಷಣೆಯೇ ಇವುಗಳ ಮೂಲೋದ್ದೇಶ. ಆದರೆ ಆತ್ಮ ರಕ್ಷಣೆಗಾಗಿ ಇತರರಿಗೆ ಶಾಸ್ತಿಯನ್ನೇನೂ ಬಯಸುವುದಿಲ್ಲ. ಇದೇ ಉದ್ದೇಶದ 'ಪೌಷ್ಟಿಕಾನಿ' ಸೂಕ್ತಗಳನ್ನೂ ಬಿಳಿಯ ಮಾಟದ ಸೂಕ್ತಗಳೆನ್ನಬಹುದು.

**ಕೃಷ್ಣೇಂದ್ರಜಾಲ :-** ಎರಡನೆಯ ಬಗೆಯ ಸೂಕ್ತಗಳು

ಹೀಗಲ್ಲ. ಅವುಗಳಲ್ಲಿ ಒಬ್ಬ ವ್ಯಕ್ತಿಯ ಜೀವನದಲ್ಲಿ ಆತನ ಸುಖ ಜೀವನಕ್ಕೆ ಅಡ್ಡಿಬರುವ ವ್ಯಕ್ತಿಗಳ ನಾಶಕ್ಕೆ-ಆತ್ಮ ರಕ್ಷಣೆಗಾಗಿ ಅನ್ಯರ ಶಿಕ್ಷೆಗೆ-ಹುಟ್ಟಿಕೊಂಡ ಮಂತ್ರಗಳಿವೆ. ಉದಾಹರಣೆಗೆ ಹೆಂಗಸೊಬ್ಬಳು ತನ್ನ ಸಾಂಸಾರಿಕ ಜೀವನಕ್ಕೆ, ಸುಖ ಶಾಂತಿಗೆ ಧಕ್ಕೆಯಾಗಿರುವ ಸಪತ್ನಿಯೋರ್ವಳನ್ನು ನಾಶಪಡಿಸಲು, ಅವಳ ಹೆಣ್ಣುತನವನ್ನೇ ನಾಶಪಡಿಸಲು, ಆಕೆಯು ನಿರ್ಋತಿಯ, ಯಮನ ನೆಂಟಳಾಗಲಿ ; ಆಕೆ ತನ್ನ ತಾಯಿ ತಂದೆಗಳ ಇಲ್ಲವೇ ಒಡಹುಟ್ಟಿದವರ ಬಾಗಿಲು ಕಾಯಲಿ; ಅವರ 'ಉಲ್ವ' ವೇ ಮುಚ್ಚಿಹೋಗಲಿ ಎಂದು ಹೇಳುವ ಮಂತ್ರ, ನೆನಸಿಕೊಳ್ಳಲೂ ಭಯಂಕರ ಅಂತೆಯೇ ಅಸಹ್ಯವಾದುದು. ಹೀಗೆಯೇ ಪ್ರೇಮಿಯೋರ್ವನು ತನ್ನ ಪ್ರೇಯಸಿಯ ಹಸ್ತವನ್ನು ಬಯಸಿ ಬರುವ ಮತ್ತೊಬ್ಬ ಪ್ರೇಮಿಯ ಗಂಡಸುತನವನ್ನೇ ನಾಶಗೈಯಲು ಬಳಸುವ ಮಂತ್ರವೂ ಅಷ್ಟೆ. ಎಲ್ಲರನ್ನೂ ಮಲಗಿಸಿ ತಾನು ಮಾತ್ರ ಕಗ್ಗತ್ತಲ ರಾತ್ರಿಯಲ್ಲಿ ಅಭಿಸಾರಿಕೆಯಾಗಿ ನುಸುಳಿಕೊಂಡು ಸಂಕೇತ ಸ್ಥಾನಕ್ಕೆ ಹೋಗಬೇಕೆಂದು ಬಯಸುವ ಸ್ವಚ್ಛಂದ ಚಾರಿಣಿಯ 'ಸ್ವಾಪನ' ಮಂತ್ರವನ್ನೂ ಈ ಬಗೆಯ ಕಾಳ ಮಾಟದ ಜಾತಿಗೆ ಸೇರಿಸಬಹುದು. ಹೀಗೆಯೇ ಮಾಟಕ್ಕೆ ಪ್ರತಿಮಾಟ, ಮಾಟಗಾರನಿಗೆ ಪ್ರತಿಮಾಟ ಮುಂತಾದವೂ 'ಕೃಷ್ಣೇಂದ್ರ ಜಾಲ' ದ ಸಾಲಿಗೇ ಸೇರತಕ್ಕವುಗಳು.

ತನಗೆ ಮಾತ್ರ ಒಳ್ಳೆಯದಾಗಲಿ 'ಗಂಡುಮಕ್ಕಳಾಗಲಿ. ಹೆಣ್ಣು ಬೇರೊಂದೆಡೆಯಲ್ಲಿ ಜನಿಸಲಿ' ಎಂದು ಇತರರಿಗೆ ಹಾನಿ(?) ಬಯಸಬೇಕೆನ್ನುವುದು; "ಯೋ ऽಸ್ಮಾನ್ ದ್ವೇಷ್ಟಿ ಯಂ ವಯಂ ದ್ವಿಷ್ಮಸ್ತಂ ವೋ ಜಂಭೇ ದಧ್ಮಃ"—"ಆರೆಮ್ಮ ದ್ವೇಷಿಪನೊ ಆರ ನಾವು ದ್ವೇಷಿಪೆವೊ ? ನೂಂಕುವೆವು ಅವನ ನಿಮ್ಮ

ದಾಡೆಗಳಿಗೆ” ಎಂದು ಹಾರೈಸುವುದು ಶುಕ್ಲೇಂದ್ರಜಾಲವೆಂದು ಹೇಳಲು ಹಿಂಜರಿಯಬೇಕಾಗುತ್ತದೆ.

**ಇಂದ್ರಜಾಲ :** ಅಥರ್ವ ವೇದವೇ ‘ಇಂದ್ರಜಾಲ’ವೆಂಬ ಪದವನ್ನು ನಮಗೆ ಕೊಟ್ಟಿದೆ. ಇಂದ್ರ ದಸ್ಯುಗಳ ಸೇನೆಯನ್ನೆಲ್ಲಾ ನಾಶಪಡಿಸಿದ; ಮಹಿಯ ದಿಕ್ಕುಗಳನ್ನೇ ದಂಡಗಳನ್ನಾಗಿಯೂ ಆಕಾಶವನ್ನೇ ಜಾಲವನ್ನಾಗಿಯೂ ಮಾಡಿ ತನ್ಮೂಲಕ ಅವರನ್ನು ಮೋಸಗೊಳಿಸಿದ.

“ಅಂತರಿಕ್ಷಂ ಜಾಲಮಾಸೀತ್: ಜಾಲದಂಡಾ ದಿಶೋ ಮಹೀಃ।
ತೇನಾಭಿಧಾಯ ದಸ್ಯೂನಾಂ ಶಕ್ರಃ ಸೇನಾಮುಪಾವಪತ್ ॥

ಲ. ಲ. ೫.

“ವಾಜಿನೀವಂತ” ನಾದ ‘ಶಕ್ರ’ ನ ಜಾಲ ಬೃಹತ್ತಾದುದು.

ಲ. ಲ. ೬.

. ಅಷ್ಟೇಕೆ. ಈ ಲೋಕವೇ ‘ಇಂದ್ರಜಾಲ’.

ಅಯಂ ಲೋಕೋ ಜಾಲಮಾಸೀಚ್ಛಕ್ರಸ್ಯ ಮಹತೋ
ಮಹಾನ್ ।
ತೇನಾಹಮಿಂದ್ರಜಾಲೇನಾಮೂಂಸ್ತಮಸಾಭಿ ದಧಾಮಿ
ಸರ್ವಾನ್ ॥ ಲ. ಲ. ಲ.

ಅಥರ್ವನ್ ಪುರೋಹಿತನ ಕೃತ್ಯಾ - ಮಾಟ ಮತ್ತು ಯಾತು - ಜಾದು-ಇಂದ್ರನ ಬೃಹತ್ತಾದ ಜಾಲದಷ್ಟೇ ವಂಚಕ ಶಕ್ತಿಯುಳ್ಳುದು. ಅದು ‘ತಮಸ್.’

**ಮಾಟ :** ಮಾಟಮಾಡುವವರು (ಯಾತುಕೃತ್) ಮಾಟವನ್ನು (ಕೃತ್ಯಾ) ಮಾಡಲು ಬೊಂಬೆ ಮಾಡಿಕೊಳ್ಳುತ್ತಿದ್ದರು. ಅದು ಸಾಮಾನ್ಯವಾಗಿ ಎರಡು ಅಥವಾ ನಾಲ್ಕು ಕೈಗಳ ಅಲಂಕೃತ ಹೆಣ್ಣು ಬೊಂಬೆ. ವಿವಿಧ ರೀತಿಯಲ್ಲಿ ಅವನ್ನು

ಮಾಡಬಹದು. ಮದುವೆಯ ಹೆಣ್ಣಿನ ಶೃಂಗಾರ ಅದಕ್ಕೆ ಬೇಕು. ಮದುವೆಯ ಹೆಣ್ಣಿನ 'ಲಂಗ' ಕಂಡರೆ ಎಷ್ಟು ಪ್ರೇಮವೋ ಆ 'ಕೃತ್ಯೆ'ಗೆ! ಸರಿಯಾದಷ್ಟು ದುಡ್ಡು ಹಾಕಿ-ಅಲ್ಲ-ಕಾಣಿಕೆ ಹಾಕಿ ಮದುವೆಯ ಹೆಣ್ಣಿನ 'ಲಂಗ' ವನ್ನು ಬ್ರಾಹ್ಮಣರಿಗೆ ಕೊಡದಿದ್ದರೆ ಆ ಲಂಗವೇ ಮಾಟ ರೂಪಧಾರಿಣಿಯಾಗಿ ಹೆಣ್ಣಾಗಿ ಆ ಮದುವೆಹೆಣ್ಣಿನ ಬದಲು ಆಕೆಯಂತೆ ತಾನೇ ಮೊದಲು ಪತಿಯನ್ನು ಪ್ರವೇಶಿಸಿಬಿಡುತ್ತಿತ್ತು (೧೪.೧.೨೫). ಎಲ್ಲಿ ಬೇಕಾದರೂ ಈ ಮಾಟ ಮಾಡಬಹುದಿತ್ತು. ಯಾರು ಬೇಕಾದರೂ ಮಾಡಬಹುದಿತ್ತು.. ಅದಕ್ಕಿಲ್ಲದ ರೂಪಿಲ್ಲ; ಹೋಗಲಾಗದ ಜಾಗವಿಲ್ಲ; ಎದುರಿಸಲಾಗದ ವ್ಯಕ್ತಿಯಿಲ್ಲ. ಜತೆಗೆ ಆಗ ಮಾಟಮಾಡದವರೇ ಪಾಪಿಗಳು; ರಾಜರು, ಶೂದ್ರರು, ಸ್ತ್ರೀಯರು ಎಲ್ಲರೂ ಮಾಡುತ್ತಿದ್ದರು. (ರಾಜಕೃತಾ, ಶೂದ್ರಕೃತಾ, ಸ್ತ್ರೀಕೃತಾ).

**ಮಾಟದ ಲಕ್ಷಣ :** 'ಸಮಾನ ಕಾರಣಗಳು ಸಮಾನ ಕಾರ್ಯ ಉತ್ಪತ್ತಿ ಮಾಡುತ್ತವೆ. ಸಮಾನ ಫಲ (ಕಾರ್ಯ) ದೊರೆಯ ಬೇಕಾದರೆ, ದೊರೆತಿರಬೇಕಾದರೆ ಸಮಾನ ಕಾರಣಗಳಿದ್ದೇ ತೀರಬೇಕು. ಕಾರ್ಯವು ಕಾರಣವನ್ನು ಹೋಲುತ್ತದೆ.'ಈ ಭಾವನೆ ಅಥರ್ವವೇದದ ಮಾಟಕ್ಕೆ ಮೂಲಾಧಾರ. ಇದೇ ಅದರ ಜೀವ ದುಸಿರು. ಏರಿಯನ್ನು ಒಡೆದರೆ ನೀರು ಮುನ್ನುಗ್ಗುತ್ತದೆ. ಅದೇ ರೀತಿ ಕಟ್ಟಿಕೊಂಡ ಮೂತ್ರ ಹೊರ ಬರಬೇಕು, ಮೂತ್ರ ಬರುವ ಮಾರ್ಗವನ್ನು ಭೇದಿಸಿದರೆ. (ಪ್ರ ತೇ ಭಿನದ್ಮಿ ಮೇಹನಂ ವರ್ತ್ರಂ ವೇಶಂತ್ಯಾ ಇವ). 'ಶಮೀ' ವೃಕ್ಷದ ಮೇಲೆ ಅಶ್ವತ್ಥ ವೃಕ್ಷವೇರಿತು; ಮಂಥನದಿಂದ ಅಗ್ನಿಕಣ ಹಾರಿತು. 'ಶಮೀ' ಸ್ತ್ರೀ. 'ಅಶ್ವತ್ಥ' ಪುರುಷ. ಅಂತೆಯೇ ಈ

ಸ್ತ್ರೀಯಲ್ಲಿ ಗಂಡಾಗಲಿ. ಇಲ್ಲಿ ಒಂದು ಕಡೆ ಒಂದು ಬಗೆಯ ಕಾರಣಗಳಿಂದ ಒಂದು ವಿಧದ ಕಾರ್ಯವಾದರೆ ಅದೇ ತರಹ ಕಾರಣಗಳಿಂದ ಬೇರೊಂದೆಡೆಯಾದರೇನು? ಅಂತಹುದೇ ಕಾರ್ಯ– ಫಲ- ದೊರೆಯಬೇಕು. 'ಅರುಂಧತೀ' ಎಂಬ ಮೂಲಿಕೆಗೆ 'ರೋಹಿಣೀ' ಎಂಬ ಹೆಸರು ಇದೆ. ಅದು 'ರೋಹಿಣೀ' ಯಾದ್ದರಿಂದ ಬೆಳೆಯಲೇಬೇಕು — ಬೆಳೆಸಲೂ ಬೇಕು. ಆದ್ದರಿಂದ ಅಥರ್ವ ವೇದದ 'ಬ್ರಹ್ಮನ್' ಪುರೋಹಿತನು—

ರೋಹಿಣ್ಯಸಿ ರೋಹಿಣ್ಯಸ್ಥ್ನಶ್ಛಿನ್ನಸ್ಯ ರೋಹಣೀ!
ರೋಹಯೇದಮರುಂಧತಿ || ೪.೧೨.೧.
ರೋಹಿಣಿಯ ನೀನೆಲಾ ಛಿನ್ನಾಸ್ಥಿ ರೋಹಣಿಯು |
ಇದನರುಂಧತಿ ನೀನು ಬೆಳೆಸಬೇಕಾ ||

ಎಂದು ಪ್ರಾರ್ಥಿಸುತ್ತಿದ್ದನು. ಮೂಳೆಮುರಿದಿದೆ; ಅದು ಕೂಡಿಕೊಳ್ಳಬೇಕು. 'ರೋಹಿಣೀ' ಮೂಲಿಕೆಯ ಹೆಸರು 'ಬೆಳೆಸುವವಳು'; ಆದ್ದರಿಂದ ಮುರಿದ ಮೂಳೆಯನ್ನು ಅದು ಬೆಳೆಸಲೇಬೇಕಲ್ಲ!.

**೧. ಅನುಕೃತಿಮಾಟ—೨. ಸಾಂಪರ್ಕಿಕ ಮಾಟ.**

ಈ ಮೇಲೆ ಹೇಳಿದುದು ಅನುಕೃತಿ ಮಾಟ. (Imitative Magic). ಏಕೆಂದರೆ ಒಂದು ಕಡೆಯಲ್ಲಿ ಆಗುವ ಕಾರ್ಯದ ಮೂಲಕಾರಣಗಳನ್ನು ಅನುಕರಿಸಿ ಇನ್ನೊಂದೆಡೆ ಅದೇ ರೀತಿಯ 'ಕಾರ್ಯ' ಸಾಧಿಸಲು 'ಕೃತ್ಯಾ ಕೃತ್' ಯೋಚಿಸುತ್ತಾನೆ. ಇದೇ ರೀತಿ ಇನ್ನೊಂದು ಬಗೆಯ ಮಾಟ ಅಥರ್ವ ವೇದದಲ್ಲಿ ಕಾಣುತ್ತದೆ. ಒಬ್ಬನಿಗೆ ಆಗದ ಮತ್ತೊಬ್ಬ ಎಲ್ಲೋ ದಾರಿಯಲ್ಲಿ ನಡೆದು ಹೋಗಿರುತ್ತಾನೆ. ಆತ ತುಳಿದ ದಾರಿಯ

ಧೂಳನ್ನು ಬೆಂಕಿಯಲ್ಲಿ ಬಿಸುಟರೆ ಅವನು ಅಗ್ನಿದಗ್ಧನಾಗ ಬೇಕು! ಧೂಳು ಅವನ ಶರೀರಸಂಪರ್ಕ ಹೊಂದಿರುವುದಿಲ್ಲವೆ? ಇದನ್ನು ಸಾಂಪರ್ಕಿಕ ಮಾಟ (Contagious Magic) ಎನ್ನಬಹುದು.

**ಮಾಟದ ಉದ್ದೇಶ :** ಅಥರ್ವ ವೇದದ ಮಾಟದ ಉದ್ದೇಶ ದ್ವಿಮುಖವಾದುದು. ಮೊದಲನೆಯದು ಆತ್ಮ ರಕ್ಷಣೆ. ಭೈಷಜ್ಯಾನಿ (ಆಯುರ್ವೇದೀಯ,) ಪೌಷ್ಟಿಕಾನಿ (ಸುಖ, ಸಂಪತ್ ಸಮೃದ್ಧಿಗೆ) ರಾಜ ಕರ್ಮಾಣಿ(ರಾಜಕೀಯ ಉದ್ದೇಶದ), ಸ್ತ್ರೀ ಕರ್ಮಾಣಿ (ಕೌಟುಂಬಿಕ ಜೀವನಕ್ಕೆ ಸಂಬಂಧಿಸಿದ) ಮುಂತಾದ ಸೂಕ್ತಗಳಲ್ಲೆಲ್ಲ ಆತ್ಮ ರಕ್ಷಣೆಗಾಗಿ—ಇತರರಿಗೆ ಕೇಡೆಣಿಸದ ರೀತಿಯಲ್ಲಿ ಸ್ವಹಿತ ಸಂಪಾದನೆಗಾಗಿ-ಮಂತ್ರಗಳಿವೆ.

ಆದರೆ ಆತ್ಮರಕ್ಷಣೆಯ ದಾರಿ ಸುಗಮವಾಗಲು ತಡೆ ಬಂದ ಎಡರುಗಳು, ರೋಗಗಳು, ವ್ಯಕ್ತಿಗಳು, ಶಕ್ತಿಗಳು, ಮಂತ್ರ ಮಾಟಗಳು ಇವುಗಳನ್ನು ಎದುರಿಸಬೇಕಾಗುತ್ತದೆ; ನಾಶಪಡಿಸ ಬೇಕಾಗುತ್ತದೆ. ಇದಕ್ಕಾಗಿ ಇರುವ ಮಂತ್ರಗಳು, ಎರಡನೆಯ ಬಗೆಯುವು: ದುಷ್ಟ ಶಿಕ್ಷಣ ಮಂತ್ರಗಳು.

**ಮಾಟದ ಪರಿಕರಗಳು :** ಮಾಟ ಮಾಡಲು ಅಥರ್ವಣ ಪುರೋಹಿತನ 'ಬ್ರಹ್ಮನ್' ಶಕ್ತಿಯೇ ಬಹು ಮುಖ್ಯ. ಅದೇ ಆದಿಮಧ್ಯಾಂತ. ತನ್ನ ಬ್ರಹ್ಮನ್ ಶಕ್ತಿಯಿಂದ ತಾನು ಉಚ್ಚರಿಸುವ ಮಂತ್ರಗಳ ಶಬ್ದ ಶಕ್ತಿಯಿಂದ, ತನ್ನ ವಾಕ್ ಶಕ್ತಿಯಿಂದ, ತಾನು ಅಭಿಮಂತ್ರಿಸಿ ಚಿಮುಕಿಸುವ 'ಜಲ' ಶಕ್ತಿಯಿಂದ, ನಾನಾವಿಧವಾದ ತಾಯಿತುಗಳಿಂದ, ಕೆಲವು ವೇಳೆ ವೈರಿಯ ಪ್ರತಿಮೆ ಅಥವಾ ಚಿತ್ರವನ್ನು ಮಾಡಿಕೊಂಡೋ ಇಲ್ಲವೇ ಬರೆದುಕೊಂಡೋ ಅದನ್ನು ವೈರಿಯೆಂದು ಬಗೆದು

ಮಾಡಬೇಕಾದ 'ಶಾಸ್ತಿ' ಮಾಡುವುದರಿಂದ ಬ್ರಹ್ಮನ್ ಪುರೋಹಿತನು ಅನಿಷ್ಟನಿವಾರಣೆ ಮಾಡಿ ಇಷ್ಟಸಂಪಾದನೆ ಮಾಡುವನು.

ಈ ಉದ್ದೇಶದಿಂದ- ಯಜ್ಞಯಾಗಗಳಿಗೆ ಹೇಗೋ ಹಾಗೆ ಬ್ರಹ್ಮನ್ ಪುರೋಹಿತನು ದೀಕ್ಷಾ ಬದ್ಧನಾಗುತ್ತಿದ್ದನು. ಜಲ ವನ್ನು ಅಭಿಮಂತ್ರಿಸಿ ರೋಗಿಯ ಮೇಲೆ ಇಲ್ಲವೇ ಯಾವ ವೈರಿಯನ್ನು ನಾಶಪಡಿಸಬೇಕೋ ಅವನ ಮೇಲೆ ಎಸೆಯುವನು. ವೈರಿ ಇರುವ ದಿಕ್ಕಿಗೆ ಎಸೆದರಾಯಿತು! ಆಗಬೇಕೆಂದಿಚ್ಛಿಸಿದ ಶಾಸ್ತಿ ಆಗಲೇಬೇಕು. ಇಂತಹ ಮಂತ್ರಪೂರಿತಜಲ 'ಉದವಜ್ರ'.

ಜಲವೆಷ್ಟು ಮುಖ್ಯವೋ ಅಗ್ನಿಯೂ ಅಷ್ಟೇ ಮುಖ್ಯ 'ಈ ಯಾತು' ಕ್ರಿಯೆಗಳಿಗೆ. ಇಂದ್ರ, ಅಗ್ನಿ, ವರುಣ, ರುದ್ರ ಮುಂತಾದ ದೇವತೆಗಳಿಗೆ ಆಜ್ಯಾಹುತಿ (ತುಪ್ಪದ ಹವಿಸ್ ದಾನ); ನಿರ್ಋತಿ, ಮೃತ್ಯು ಮುಂತಾದ ಕ್ರೂರ ದೇವತೆಗಳಿಗೆ 'ಹೊಟ್ಟು' ಮುಂತಾದುವುಗಳ ಆಹುತಿ! ವೈರಿ ಯಾರೇ ಆಗಲಿ ನಾಶವಾಗುವನು. ವೈರಿಯ ಯಜ್ಞದ ಸದುದ್ದೇಶ (ಅವನ ದೃಷ್ಟಿಯಿಂದ) ದುಷ್ಟಫಲವನ್ನೀಯುವುದು. ರಾಕ್ಷಸರು, ಪಿಶಾಚಿಗಳು ಇವರುಗಳ ವಿರುದ್ಧ 'ಯಾತು' ಕ್ರಿಯೆಗಳೇ ಹೆಚ್ಚಾಗಿ ಮಾಡಲ್ಪಡುತ್ತಿದ್ದುವು. ಇತರ ವ್ಯಕ್ತಿಗಳು, ಸಪತ್ನೀ, ಅರಿರಾಯರು; ಮಾಟಗಾರರು ಇತ್ಯಾದಿಗಳಿಗೆ 'ಕೃತ್ಯಾ' ಗಳೇ ಹೆಚ್ಚು ಉಪಯುಕ್ತವಾಗಿದ್ದುವು.

ಇಂತಹ ಉದ್ದೇಶದಿಂದ ಕೂಡಿದ ಪ್ರತಿ ಯಜ್ಞದಲ್ಲೂ ಮೊದಲು ಅಗ್ನಿ, ವಾಯು, ಸೂರ್ಯ, ಚಂದ್ರ ಮತ್ತು ಆಪಸ್ (ಜಲದೇವತೆ) ಈ ದೇವತೆಗಳಿಗೆ 'ಪುರಸ್ತಾತ್' ಹೋಮ ಮಾಡ

ಬೇಕು. ಪ್ರತಿಯೊಂದು 'ಯಾತು' (ಜಾದು) ಅಥವಾ 'ಕೃತ್ಯಾ' (ಮಾಟ) ಕ್ರಿಯೆಗೂ ಇದನ್ನು ಮಾಡಿಯೇತೀರ ಬೇಕು.

**ತಾಯಿತಗಳು :** ರೋಗಗಳಿಗೆ ಚಿಕಿತ್ಸೆಮಾಡಲು ನಾನಾ ವಿಧವಾದ ವನಸ್ಪತಿಗಳ, ಗಿಡಮೂಲಿಕೆಗಳ ತಾಯಿತಗಳನ್ನು ಮಾಡಿ ಉಪಯೋಗಿಸುತ್ತಿದ್ದರೆಂಬುದನ್ನು ನಾವೀಗಾಗಲೇ ತಿಳಿದಿದ್ದೇವೆ. ಅದೇ ರೀತಿ ಮಾಟಕ್ಕೂ ಸಹ ತಾಯಿತಗಳನ್ನು ಉಪಯೋಗಿಸುತ್ತಿದ್ದರು. ಮಾಟದ ಬಹುಮುಖ ಉದ್ದೇಶದಲ್ಲಿ ರೋಗಪರಿಹಾರ ಒಂದು ಮುಖ ತಾನೆ! ಇದಲ್ಲದೆ ವ್ರೀಹಿ, ಯವ ಮುಂತಾದ ಧಾನ್ಯಗಳೂ ಮಾಟದ ಕ್ರಿಯೆಗಳಿಗಾಗಿ ಉಪಯೋಗಿಸಲ್ಪಡುತ್ತಿದ್ದುವು. ಕೆಲವು ತಾಯಿತಗಳ ಹೆಸರುಗಳನ್ನು ನೋಡಿ:—

೧. ಸದಂಪುಷ್ಪಾ. (ತ್ರಿಸಂಧ್ಯಾ). ೪.೨೦; ೨. ಅಪಾಮಾರ್ಗ (ಸಹದೇವೀ) ೪.೧೭; ೩-ಜಂಗಿಡ (ಆಂಗಿರಸ ಮಣಿ) ೧೯.೩೪.೧. ೨; ೪. ಶತವಾರಮಣಿ ೧೯.೪೬; ೫. ವರಣಮಣಿ. ೧೦.೩ ; ೬. ಸ್ರಕ್ತ್ಯ (ತಿಲಕ) ೮.೫೨; ೭. ನಾಭಿಲೋಮಮಣಿ (ಕೆಲವು ಮೃಗಗಳ ಹೊಕ್ಕುಳ ಕೂದಲಿನಿಂದ ಮಾಡಿದ್ದು); ೮. ವ್ಯಾಘ್ರ ಮಣಿ (ಹುಲಿಯಕೂದಲು, ಚರ್ಮ ಇತ್ಯಾದಿಗಳಿಂದ ಮಾಡಿದ್ದು); ೯. ದರ್ಭಮಣಿ, ೧೦. ಔದುಂಬರಮಣಿ, ೧೧ ಅಭೀವರ್ತಮಣಿ, ೧೨. ಅಸ್ತೃತಮಣಿ, ೧೩. ಪರ್ಣ (ಪಲಾಶ) ಮಣಿ; ೧೪. ಶಂಖ ಮಣಿ, ೧೫. ದಶವೃಕ್ಷಮಣಿ ೨.೯.೧೨; ೧೬. ಕೃಷ್ಣಮೃಗದ ಕೊಂಬು, ಚರ್ಮ ಇವುಗಳ ತಾಯಿತ, ೧೭. ಸೀಸ, ಕಬ್ಬಿಣ, ತಾಮ್ರ, ಚಿನ್ನ (೧.೯) ಮುಂತಾದ ಲೋಹಗಳ ತಾಯಿತ ಇತ್ಯಾದಿ.

ಈ ಮೇಲೆ ಹೇಳಿದ ತಾಯಿತಗಳನ್ನು ನಾನಾವಿಧವಾದ ರೋಗಗಳು (ಮಾನಸಿಕ, ದೈಹಿಕ), ಪೀಡೆಗಳು, ಪಿಶಾಚಿಗಳು, ಯಕ್ಷರು, ರಾಕ್ಷಸರು, ಗಂಧರ್ವರು, ಅಪ್ಸರರು ಮುಂತಾದುವುಗಳ ಭಾಧಾಪರಿಹಾರಕ್ಕೂ ಅದೇ ರೀತಿ ದೀರ್ಘಾಯುಸ್ಸು,ಅನಿಷ್ಟ ಹಾನಿ, ಸಂಪದಭಿವೃದ್ಧಿ ಮತ್ತು ಇತರ ಅಭೀಷ್ಟಪ್ರಾಪ್ತಿಗಾಗಿಯೂ ಕಟ್ಟಿಕೊಳ್ಳುವುದು ರೂಢಿಯಲ್ಲಿತ್ತು.

**ದುಷ್ಟ ಶಕ್ತಿಗಳು :** ಅಥರ್ವವೇದದ ಆರ್ಯರಿಗೆ ತೊಂದರೆ ಕೊಡುತ್ತಿದ್ದಂತಹ ಅಪ್ಸರರು, ಗಂಧರ್ವರು, ರಾಕ್ಷಸರು(ಯಾತುಧಾನರು) ಪಿಶಾಚಿಗಳು ಇವುಗಳ ಹೆಸರುಗಳನ್ನಾದರೂ ಕೇಳಿ ಆಶ್ಚರ್ಯಪಡಿ!

ಶೇರಭಕ, ಶೇವೃಧಕ, ಮ್ರೋಕ, ಅನುಮ್ರೋಕ, ಸರ್ಪ, ಅನುಸರ್ಪ, ಜೂರ್ಣೀ, ಉಪಬ್ದ, ಅರ್ಜುನೀ, ಭರೂಜಿ (೨.೨೪) ಗ್ರಾಹೀ, ಚಂಡಾ, ನಿರೃತಿ, ತ್ರಿತ, ಅಭೂತಿ, ಪರಾಭೂತಿ, ಆರದ್ಧೀ, ಆರ್ತೀ, ಅರಾಯೀ, ಸದಾನ್ವಾ, ಮುಂಗುದಿ, ನಿಸ್ಸಾಲಾ, ಏಕವಾದ್ಯಾ (೨.೧೪). ಕಿಮೀದಿನಿ, ಉಗ್ರಂಪಶ್ಯಾ, ಉಗ್ರಜಿಹ್ವಾ, ರಾಷ್ಟ್ರಭೃತ್, ಅಲಿಜ್‌ಷ, ವತ್ಸಪ (ಕರುವಿನಂತೆ ಹಾಲುಕುಡಿದುಹಾಕಿ ಹಾಲುಸೀಯಿಸಿ ಬಿಡುವ ಭೂಪತಿ ಕಿಟ್ಟ !) ಪಲಾಲ, ಅನುಪಲಾಲ, ಷರ್ಕು, ಕೋಕ (ತೋಳನಂತಿರುವುದು), ಮಲಿಮ್ಲುಚ, ಪಲೀಜಕ, ವವ್ರಿವಾಸ, ಆಪ್ರೇಶ, ಋಕ್ಷಗ್ರೀವ (ಕರಡಿಕತ್ತು), ಪ್ರಮೀಲಿ, ದುರ್ನಾಮಾ, ಸುನಾಮಾ, ಸ್ತಂಬುಜ (ಪೊರೆ ದೆವ್ವ), ತುಂಡಿಕ, (ಸೊಂಡಿಲದೆವ್ವ) ಕುಕ್ಷಿಲ (ಡೊಳ್ಳು), ಕುಸೂಲ, ಕುತುಬ, (ಗೂನ), ಸೀಮ, ಕರುಮ, ಕುಕುಂಥ, ಕುಕೂರಭ, ಷಕಂಭರ (ಸಗಣಿದೆವ್ವ), ಷಕಂಧೂಮ (ಬೆರಣಿ ಹೊಗೆಯಿಂದ ಹುಟ್ಟಿದ್ದು),

ಉರುಂಡ, ಮಟ್‌ಮುಟ, ತಂಗಲ್ವ, ಪವೀನಸ (ಚೂಪು ಮೂಗಿನ), ಷಾಯಕ, ತುಂಡೇಲ, ಷಾಲುಡ, ಗುಗ್ಗಲೂ, ಔಕ್ಷಗಂಧೀ ಇತ್ಯಾದಿ.

ಏನು ಹೆಸರು ! ಬಹು "ಭಯಂಕರ" ಕಾಡಿಸಿರಬೇಕು ! ಈ ದುಷ್ಟಶಕ್ತಿಗಳು ಮಾನವನನ್ನು ನಾನಾರೀತಿಯಲ್ಲಿ ಕಾಡುತ್ತ ವೆಂಬ ಭಾವನೆ ಬೆಳೆದು ಬೇರೂರಿಹೋಗಿತ್ತು. ರಾತ್ರಿಯಲ್ಲಿ ಮನಬಂದ ಕಡೆ ಅಲೆಯುತ್ತಾ ಒಂದೇಸಮನೆ ಕಿರುಚುವುವು ಕೆಲವು (ಏಕವಾದ್ಯಾ). ಕೆಲವಕ್ಕೆ ಕತ್ತೆಯಂತಹ (ಗಾರ್ದಭ ರಾವ) ಕಿರುಚು ಬೇರೆ. ಮೇಲಿನ ಹೆಸರುಗಳನ್ನು ನೋಡಿ. ಅವುಗಳಿಗೆ ಯಾವ ರೂಪಿಲ್ಲ! ಕಾಮರೂಪಿಗಳವು! ನೋಡಲು ಹೆದರಿಕೆ! (ಉಗ್ರಂಪಶ್ಯಾ) ; ಹೊರಚಾಚಿದ ನಾಲಗೆ (ಉಗ್ರ-ಜಿಹ್ವಾ) ; ಕೆಲವಕ್ಕೆ 'ಜಡೆಮುನಿ' ವೇಷ ಬೇರೆ (ಮುನಿಕೇಶ). ಇಂತಹ ವಿಚಿತ್ರ, ಭಯಂಕರ ಶಕ್ತಿಗಳು ಮನುಷ್ಯನ ಮೈಮೇಲೆ ಬರುತ್ತಿದ್ದುವು. ಬಾಣಂತಿಯರಿಗೆ ಇವುಗಳಿಂದ ತುಂಬಾ ಕಾಟ. ಕಾಲುಸಂದಿಯಲ್ಲೇ ನುಸುಳಿಕೊಂಡು ಬಂದು ಬಿಡುತ್ತಿದ್ದ ವಂತೆ! ಗರ್ಭಿಣಿಯರಿಗೋ ಇವು ಕೊಡುತ್ತಿದ್ದ ಕಾಟ, ಕೀಟಲೆ, ಕೋಟಲೆ ಹೇಳಲು ಸಂಕಟ (?) ವಾಗುತ್ತದೆ. ಗಂಡನ್ನು ಹೆಣ್ಣುಮಾಡಿ ಬಿಡುತ್ತಿದ್ದುವು! 'ಹೆಣ್ಣು ಹೆಚ್ಚಿದ ಮನೆಹಾಳು' ಎನ್ನಿಸಿ ಬಿಡುತ್ತಿದ್ದುವೊ ಏನೋ !

ಗಂಧರ್ವರು ಅಪ್ಸರರಂತೂ ನೀರಿನಲ್ಲೋ, ನೀರ ತಡಿ ಯಲ್ಲೋ, (ಹೊಳೆ ಕೆರೆ ಹಳ್ಳಗಳು ಇತ್ಯಾದಿ) ತೋಪಿನಲ್ಲೋ, ಆಕಾಶದಲ್ಲೋ ಅಲೆಯುತ್ತಿರುತ್ತವೆ; ಮನೋಭ್ರಾಂತಿಯುಂಟು ಮಾಡುವುದೇ (ಮನೋಮುಹ್) ಅವುಗಳ ಅಸ್ತಿತ್ವದ ಮಹದು ದ್ದೇಶ. ಕೆಲವಂತೂ ಅಸ್ವಾಭಾವಿಕ ಲೈಂಗಿಕ ಜೀವನ ಬಯಸು

ತ್ರವೆ (೨.೨.೧೪); ನಾಯಿಯಂತೆ, ಕಪಿಯಂತೆ, ಮನಮೋಹಕ ಮುಂಗುರುಳುಗಳ ನವತರುಣನಂತೆ ನದಿಯ ದಡದಲ್ಲಿ ಸುಳಿದಾಡುತ್ತಾ ತೊಂದರೆ ಕೊಡುವರು. ವಿಶ್ವಾವಸು ಇವರ ನಾಯಕ. 'ಸದಂಪುಷ್ಪಾ' ತಾಯಿತ, 'ಅಪಾಮಾರ್ಗಾ' ತಾಯಿತ ದೆವ್ವ, ಪೀಡೆ, ಪಿಶಾಚಿ, ರಾಕ್ಷಸರನ್ನು ಓಡಿಸಿದರೆ, 'ಅಜಶೃಂಗೀ' ಎಂಬ ಸುವಾಸನೆಯ ವನೌಷಧಿಯನ್ನು ಕಟ್ಟಿ ಈ ವಿಚಿತ್ರ ಶಕ್ತಿಗಳನ್ನು ಓಡಿಸುತ್ತಿದ್ದರು.

ಹೆಣ್ಣು ಅಪ್ಸರರಂತೂ ಇನ್ನೂ ಭಯಂಕರಿಯರು. ಗುಗ್ಗುಲೂ, ಔಕ್ಷಗಂಧೀ ಮುಂತಾದ ಹೆಸರಿನ ಇವರು ಸುವಾಸಿನಿಯರಂತೆ ಸುವಾಸನೆ ಬೀರುತ್ತಾ, ನರ್ತನಮಾಡುತ್ತಾ ಮನೋಭ್ರಾಂತಿಯನ್ನುಂಟುಮಾಡಿ ಮೋಹಿಸಬಯಸುವರು; ಅಸ್ವಾಭಾವಿಕ ಲೈಂಗಿಕ ಜೀವನ ನಡೆಸಲು ಹೊಂಚುಹಾಕುವರು. ಅಥರ್ವವೇದದ ಬ್ರಹ್ಮನ್ ಪುರೋಹಿತ ಮೇಲೆ ಹೇಳಿದ 'ಅಜಶೃಂಗೀ', 'ತಾರ್‌ಷ್‌ಟ್‌ಘ್ನೀ' ಇತ್ಯಾದಿ ವನೌಷಧಿಗಳ ತಾಯಿತಗಳನ್ನು ಕಟ್ಟಿ ಈ 'ಮೋಹಿನಿ'ಗಳನ್ನು ಬಿಡಿಸಿ ಓಡಿಸುವನು.

ಮಾನವ ಜನಾಂಗದಲ್ಲಿ ಬೇರೂರಿರುವ ದೆವ್ವ, ಪೀಡೆ, ಪಿಶಾಚಿ, ಮೋಹಿನಿ ಇತ್ಯಾದಿ ವಿಷಯಗಳಲ್ಲಿರುವ ನಂಬಿಕೆಯು ಬೆಳೆದು ಬಂದ ಬಗೆಯನ್ನು ಅರಿಯಬೇಕೆಂದಿರುವ ಕೌತೂಹಲಿಗಳಿಗೆ ನಮ್ಮ ಆರ್ಯರು ಕೊಟ್ಟ ಮೊಟ್ಟಮೊದಲಿನ 'ರಿಕಾರ್ಡ್' ಯಾವುದೆಂದರೆ: ಅಥರ್ವವೇದ.

**ಅಥರ್ವವೇದದ ಧಾರ್ಮಿಕಭಾವನೆ ಐಂದ್ರಜಾಲಿಕ, ಮಾಟ ಧಾರ್ಮಿಕ ಮಾಟ:** ಅಥರ್ವವೇದದಲ್ಲಿ ಮಾಟವನ್ನುಳಿದ ಧಾರ್ಮಿಕ ಭಾವನೆಯಿಲ್ಲ. ಅದರಲ್ಲಿ ಕಂಡುಬರುವ

ಧಾರ್ಮಿಕ ಭಾವನೆಯೆಲ್ಲವೂ ಮಾಟಮಯ (Magical Religion). ಮಾಟವೋ ಎಲ್ಲವೂ ಧಾರ್ಮಿಕ ಭಾವನೆಯಿಂದ ಕೂಡಿದುದು. (Religious Magic) ಅದೇ ಬೇರೆ, ಇದೇ ಬೇರೆ ಎಂದು ತೋರಿಸುವುದು ಕಷ್ಟಸಾಧ್ಯ-ಅಲ್ಲ-ದುಸ್ಸಾಧ್ಯ ವೆನ್ನಬೇಕು.

ಈ ಧಾರ್ಮಿಕ ಇಂದ್ರಜಾಲವು ಎಲ್ಲರಿಗಾಗಿ ಎಲ್ಲ ಅಶುಭ ಗಳನ್ನು ಪರಿಹರಿಸಿ, ಶ್ರೇಯಸ್ಸು ಪ್ರೇಯಸ್ಸುಗಳನ್ನು ಒದಗಿಸ ಬೇಕೆಂಬ ಉದ್ದೇಶ ಹೊಂದಿದೆ. ರಾಜನಿಗೆ, ರೈತನಿಗೆ, ವರ್ತಕನಿಗೆ, ಪುರೋಹಿತನಿಗೆ, ಹೆಣ್ಣಿಗೆ, ಗಂಡಿಗೆ, ಮಕ್ಕಳಿಗೆ, ಮುದುಕರಿಗೆ, ಪಶು ಪ್ರಾಣಿಗಳಿಗೆ ಸಕಲರಿಗೂ ವೈರಿಗಳಿಂದ, ಅವರ ಮಾಟಗಳಿಂದ, ವಿಷಕ್ರಿಮಿಗಳಿಂದ, ವಿಷಲೇಪಿತ ಬಾಣ ಗಳಿಂದ, ದುಷ್ಟಶಕ್ತಿಗಳಿಂದ, ರೋಗರುಜಿನಗಳಿಂದ, ಪ್ರತ್ಯಕ್ಷ ಪರೋಕ್ಷ ಪಾಪಗಳಿಂದ, ಎಲ್ಲದರಿಂದ ವಿಮುಕ್ತಿಯನ್ನು ಪಡೆದು, ಆರೋಗ್ಯ, ಸೌಂದರ್ಯ, ಸುಖಜೀವನ, ದೀರ್ಘಾ ಯುಸ್ಸು, ಶಾರೀರಿಕ ಮಾನಸಿಕ ಬಲ ಮುಂತಾದುವುಗಳನ್ನು ಪಡೆದು 'ಸವ'ಗಳನ್ನು ಮಾಡಿ 'ಇಷ್ಟಾಪೂರ್ತ' ದಿಂದ ಪುಣ್ಯ ಸಂಚಯಮಾಡಿ ಜರಾಮೃತ್ಯುವನ್ನು ಪಡೆದು ಯಮಲೋಕ ದಲ್ಲಿ-ಸ್ವರ್ಗಲೋಕದಲ್ಲಿ-ಸುಖ, ಶಾಂತಿ, ಸಂತೃಪ್ತಿಗಳಿಂದ ಕೂಡಿದ ಜೀವನಕ್ಕೆ ಮಾರ್ಗ ಕಲ್ಪಿಸಿಕೊಳ್ಳಬೇಕೆಂಬ ಭಾವನೆ ಯೊಂದೇ ಒಟ್ಟಿನಲ್ಲಿ ಅಥರ್ವವೇದದ ಐಂದ್ರಜಾಲಿಕಧರ್ಮದ ಮೂಲೋದ್ದೇಶ ಮತ್ತು ಚರಮಗುರಿಯಾಗಿತ್ತು.

## ೪. ಸಾಮಾಜಿಕ ಜೀವನ

ಆರ್ಯರ ಗೃಹಸ್ಥ ಜೀವನವನ್ನು ಅಥರ್ವವೇದವು ಚಿತ್ರಿಸು ವಷ್ಟು ವಿವರವಾಗಿ ಮತ್ತಾವ ವೇದವೂ ಚಿತ್ರಿಸಿಲ್ಲ. "ತೊಟ್ಟಿಲಿ

ನಿಂದ ಹಿಡಿದು ಚಿತೆಯೊಟ್ಟಲಿನ ತನಕ ಅಲ್ಲಿಂದ ಮರಣಾನಂತರದ ಸ್ಥಿತಿಯವರೆಗಿನ ದಿಟದ ಚಿತ್ರವನ್ನು ನಾವಿಲ್ಲಿ ಕಾಣುತ್ತೇವೆ." "ನಾಗರಿಕತೆಯ ಇತಿಹಾಸ ದೃಷ್ಟಿಯಿಂದ ಅಥರ್ವವೇದವು ಋಗ್ವೇದಕ್ಕಿಂತಲೂ ಸ್ವಾರಸ್ಯವೂ ಪ್ರಾಮುಖ್ಯವೂ ಆಗಿದೆ." "ಗೃಹ್ಯಧರ್ಮಗಳಿಗೆ ಅಥರ್ವವೇದವು ಒಂದು 'ಖನಿ'" ಎಂಬುದಾಗಿ ವಿಮರ್ಶಕರು ಮುಕ್ತಕಂಠದಿಂದ ಅಥರ್ವವೇದದ ಸಾಮಾಜಿಕ ಜೀವನಚಿತ್ರಣವನ್ನು ಕುರಿತು ನುಡಿದಿದ್ದಾರೆ.

ಈಗಾಗಲೇ ನಮಗೆ ತಿಳಿದಿರುವಂತೆ ಅಥರ್ವವೇದೀಯರ ಜೀವನವೆಲ್ಲ ಮಾಟಮಾಯವಾಗಿತ್ತೇನೋ ಎಂಬ ಭಾವನೆಗೆ ಅವಕಾಶವಿದೆ; ಹುಟ್ಟಲು ಮಾಟ! ಹುಟ್ಟಿಸಲು ಮಾಟ! ಬೆಳೆಯಲು ಮಾಟ! ಸತ್ತು ಯಮಲೋಕಕ್ಕೆ ಹೋಗುವಾಗಲೂ ಮಾಟ! ಅವರ ಧರ್ಮವೇ ಮಾಟಮಯವಾಗಿ ಹೋಗಿತ್ತು. ಇದಕ್ಕೆ ಕಾರಣವಿಷ್ಟೆ. ತಾವು ಯಾವ ಕಾರ್ಯ ಮಾಡಿದರೂ ದೈವಕೃಪೆ, ದೈವಿಕ ಶಕ್ತಿಗಳ ಕರುಣೆ ಅವರಿಗೆ ಬೇಕಾಗಿತ್ತು. ಒಳ್ಳೆಯ ಫಲವನ್ನು ಸಚ್ಛಕ್ತಿಗಳು ಕರುಣಿಸುವರೆಂದು ಹೇಗೆ ನಂಬಿದ್ದರೋ ದುಷ್ಫಲಗಳನ್ನು ದುಷ್ಟಶಕ್ತಿಗಳು ಉಂಟುಮಾಡುತ್ತವೆಂದು ಅದಕ್ಕಿಂತ ಹೆಚ್ಚಾಗಿ ನಂಬಿದ್ದರು. ಈ ದುಷ್ಟಶಕ್ತಿಗಳನ್ನು ನಾಶಪಡಿಸಲು ಸಚ್ಛಕ್ತಿಗಳು ಸಹಾಯ ಮಾಡಬೇಕು. ಇಲ್ಲದಿದ್ದರೆ ಬಲಾತ್ಕರಿಸಿಯಾದರೂ ಅವರಿಂದ ಮಾಡಿಸಿಯೇ ತೀರುತ್ತಿದ್ದರು. ಆದ್ದರಿಂದಲೇ ಮಾತು ಮಾತಿಗೆ ದುಷ್ಟಶಕ್ತಿಗಳ ನಾಶಕ್ಕಾಗಿ ದೈವೀಶಕ್ತಿಗಳ ಜ್ಞಾಪಕ ಅವರಿಗೆ ಬರುತ್ತಿತ್ತು.

ಇಷ್ಟಾದರೂ ಅಥರ್ವವೇದೀಯರು ದೇವತೆಗಳೇ ಕೊಡ

ಬೇಕು. 'ಬ್ರಹ್ಮನ್' ಪುರೋಹಿತನೇ ಕೊಡಿಸಬೇಕು. ಇಲ್ಲ ದಿದ್ದರೆ ಇಲ್ಲವೆಂದು ಕಾದುಕುಳಿತವರಲ್ಲ. ಋಗ್ವೇದದ ಆರ್ಯರ ಕಾಲದಿಂದಲೂ ರೂಢಿಗೆ ಬಂದಿದ್ದ ಪಶುಪಾಲನೆ, ವ್ಯವಸಾಯ, ವ್ಯಾಪಾರ ಇತ್ಯಾದಿ ಅವರ ಮುಖ್ಯ ಕಸಬಾಗಿ ದ್ದುವು. ನಿಜವಾಗಿಯೂ ಅವರು

"ನೇಗಿಲ ಹಿಡಿದಾ ಹೊಲದೊಳು ಹಾಡುತ

ಉಳುವಾ ಯೋಗಿಯ ನೋಡಲ್ಲಿ" ಎಂದು ಕವಿವರ್ಯ ಶ್ರೀ ಕುವೆಂಪು ಹಾಡಿರುವಂತೆ ನೇಗಿಲಯೋಗಿಗಳು, ಧೀರರು, ಭಕ್ತರು, ಅಂತೆಯೇ ಕವಿಗಳು! 'ಹೊನ್ನಾರು' ಕಟ್ಟುವ ಹೊನ್ನಗಳಿಗೆಯಲ್ಲಿ ಹಾಡಲು ಹೆಣೆಯಲ್ಪಟ್ಟಿರುವ ಅಥರ್ವ ವೇದದ ಸೂಕ್ತವೊಂದು (೩-೧೭)

ಸೀರಾ ಯುಞ್ಜನ್ತಿ ಕವಯೋ ಯುಗಾ ವಿ ತನ್ವತೇ
ಪೃಥಕ್ ||
ಧೀರಾ ದೇವೇಷು ಸುಮ್ನಯೌ ||

ಎಂದು ನೇಗಿಲಯೋಗಿಯ ಚಿತ್ರವನ್ನು ಜನತೆಯ ಮುಂದಿಡುತ್ತದೆ.

ಮೇಲಿನ ಸೂಕ್ತದ ಕನ್ನಡ ಭಾವಾನುವಾದವನ್ನು ಕೇಳಿ:-

ನೇಗಿಲ ಕಟ್ಟಿಯೆ ಉಳುವಾ ಹಗ್ಗದಿ
ನೊಗವನು ಬಿಗಿವರು ರೈತಜನ;
ಧೀರರು ಅವರೆಯೆ, ಕವಿಗಳು ಅವರೇ,
ದೇವರ ದೇವರ ಭಕುತಜನ! ೩. ೧೭. ೧

ನೊಗದಾ ಮೇಲೆ 'ಈಚ'ನು ಇಟ್ಟು
ಹಗ್ಗವ ಕಟ್ಟಿರಿ ಬಿಗಿಯಾಗಿ;
ತಿರೆಯಲಿ ಉಕ್ಕೆಯ ತೆರೆಯದು ಮೂಡಲು

ಕರದಿಂ ಬೀಜವನುರೆ ಬಿತ್ತಿ !
ಸುಗ್ಗಿಯು ಕರುಣಿಸು ವಿರಾಜದೇವನೆ
ಸಿಗಲ್ಕೈ ಕುಡುಲಿಗೆ ಬಲಿತ ಯವ. ೩. ೧೭. ೨

ಮೇಣಿಯು ಸೇರಿಸಿ ಮಿಣಿಯಿಂ ಕಟ್ಟಿಹ
ನೇಗಿಲ ಚೂಪಿನ ಭುಜವದು ಸುಗ್ಗಿಯು
ಸಗ್ಗದ ಸೊಬಗನು ತರಲಿಮಗೆ;
ತುರುವನು, ಕುರಿಯನು, ತ್ವರೆಯಿಂದೋಡುವ
ತುರಗವನೀಯಲಿ ಎಮಗಿನ್ನು,
ಹರೆಯದ ಹೊಸ್ತಿಲಿಗಡಿಯಿಡುತಿರುವಾ
ಅರಳಿದ ವರತನು ರಮಣಿಯನು ॥ ೩. ೧೭. ೩

ಕವಿಯೂ ದೈವಭಕ್ತನೂ ಆದ ಆ ಭೂಸುತನಿಗೆ-ಮಣ್ಣಿನ ಮಗನಿಗೆ-ಬೇಕಾಗಿದ್ದುದು ಬೆಳೆದು ಬಲಿತು ಕುಡುಗೋಲಿಗೆ ಅಡವಾಗಿ ಸಿಗುವ ಗೋಧಿ, ಹಾಲಿಗೊಂದು ಹಸು, ಬೆಚ್ಚನೆಯ ಕಂಬಳಿಗಾಗಿ ಕುರಿ, ಊರಿಂದೂರಿಗೋ ಮನೆಯಿಂದ ಹೊಲಕ್ಕೋ ಹೋಗಿ ಬರಲು ಒಂದು ಕುದುರೆ; ಇಂತಹ ತೃಪ್ತ ಜೀವನವನ್ನು ಮತ್ತೂ ರಸಮಯವಾಗಿ, ಆನಂದಮಯವಾಗಿ ಮಾಡಲು ಜೀವನದ ಒಡನಾಡಿ, ಹರೆಯದ ಹೊಸ್ತಿಲಿಗಡಿ ಯಿಡುತ್ತಿರುವ ಅರಳಿದ ವರತನು ರಮಣಿಯೋರ್ವಳು.

**ವಶೀಕರಣ ಮಂತ್ರದಲ್ಲಿ ನಂಬುಗೆ :**—ಕೆಲವು ವೇಳೆ ಅಂತಹ ಮನಮೆಚ್ಚಿದ ನಲ್ಲೆ ದೊರಕುವುದು ಕಷ್ಟವಾಗುವುದು. ಆಕೆಯ ತಾಯಿತಂದೆಗಳು ಇಷ್ಟಪಡದಿರಬಹುದು. ಆಕೆಯೇ ಈತನ ವಿಷಯದಲ್ಲಿ ಔದಾಸೀನ್ಯದಿಂದಿರಬಹುದು. ಆದ್ದರಿಂದ ಆಕೆಯ ಹೃದಯವನ್ನು ಗೆಲ್ಲಲು ಮಧುರಸಮೂಟಿಯಾಗಿ, ಹಾಲ್ಜೇನ ಹೊನಲಾಗಿ ಕಾಣಲು ಹಗಲಿರುಳು ಹಂಬಲಿಸ

ಬೇಕಾಯಿತು. ಅದಕ್ಕಾಗಿ ವಶೀಕರಣ ಮಂತ್ರವನ್ನು ಕೈಯಲ್ಲಿ ಉಚಿತವಾದ ಮೂಲಿಕೆ ಹಿಡಿದು ಪಠಿಸುವನು.

೧—೩೪

ಮಧುವಿನಿಂದಲೆ ಇನ್ನು ಜನಿಸಿಹುದು ಈ ಬಳ್ಳಿ !
ಮಧುವಿನಿಂ ಅಗೆಯುವೆವು, ನಿನ್ನ ಓ, ಬಳ್ಳಿ !
ಮಧುವಿನಿಂದಲೆ ನೀನು ಜನಿಸಿರ್ಪೆ ಔಷಧಿಯೆ !
ಮಧುವಿಂಗೆ ಸುಮನೆನ್ನ ಮಾಡೆಲೌ ನೀನು !

ಮಧುವಿದೆ ಎನ್ನಯ ಜಿಹ್ವಾಗ್ರದಲಿ !
ಮಧುವಿದೆ ಜಿಹ್ವೆಯ ಮೂಲದಲಿ !
ಎನ್ನಯ ಮನದಿಚ್ಛೆಯಲೇ ನೀನು
ಎನ್ನಿಂಗಿತದಲೆ ನೀನಿರುವೆ !



ಮಧುಮಯವಾಗಿದೆ ಎನ್ನಾಗಮನ !
ಮಧುಮಯವಾಗಿದೆ ನಿರ್ಗಮನ !
ಸೊದೆಯೊಸರುವ ಸವಿನುಡಿಯನು ನುಡಿವೆ !
ಮಧುಸಂದರ್ಶನ ನಾಂ ಕೊಡುವೆ !

ಮಧುವನು ಮೀರಿಪೆ ಮಧುತನದಲ್ಲಿ !
ಮಧುಮತ್ತರನತಿಮಧುರಕು ನಾ !
ಮಧುಮಯವಾಗಿಹ ತರುಶಾಖೆಯನು
ಮೆಚ್ಚುವ ಬಗೆಯಲಿ ಮೆಚ್ಚೆಲೆ ನೀ !

ದ್ವೇಷವನೋಡಿಸೆ ನಿನ್ನಯ ಸುತ್ತಲು
ಕಬ್ಬಿನ ಕಟ್ಟನು ಕಟ್ಟಿಹೆ ನಾ !
ಎನ್ನನೆ ಕಾಮಿಸಿ ಎನ್ನಂ ಪ್ರೇಮಿಸಿ
ಅಗಲದ ಪರಿಯಲಿ ಮಾಡಿಹೆ ನಾ ! ೧—೩೪

ಆದರೂ ನಲ್ಲೆ ಒಲಿಯಲಿಲ್ಲವೇನೋ ! ಮತ್ತೆ ಮಾಟಮಾಡಿ,

ಮಂತ್ರಪಠನ ಮಾಡಿ ಬಲಾತ್ಕರಿಸಬೇಕಾಯಿತು. ನಲ್ಲೆಯ ಚಿತ್ರವೊಂದನ್ನು ಬರೆದು ಹಗಿತವಾದ ಆಯುಧವೊಂದನ್ನು ಹಿಡಿದು ಚಿತ್ರಾರ್ಪಿತ ಪ್ರೇಯಸಿಯನ್ನೇ 'ದುರುದುರು' ನೋಡುತ್ತಾ ಕೈಯಲ್ಲಿಯ ಆಯುಧವನ್ನೇ ಕಾಮನ ಭೀಮ ಬಾಣವೆಂದು ಕರೆದು ಆಕೆಯ ಹೃದಯವನ್ನು ಪರಿವರ್ತಿಸಲು ಪ್ರಯತ್ನಿಸುವನು :—

ಚೋದಿಪನು ನಿನ್ನೆದೆಯ ಚುಚ್ಚಲಿ !
ಮಲಗಬೇಡೆಲೆ ಶಯನದೆ !
ಕಾಮದೇವನ ಭೀಮಬಾಣದೆ
ನಿನ್ನ ಹೃದಯವ ಭೇದಿಪೆ ! ೧

'ಆಧಿ' ಪತ್ರದ 'ಕಾಮ' ಸರಳಿನ
ಸಂಕಲ್ಪಕೊರಳಿನ ಇಷುವನು
ಅದನು ಗುರಿಗೇ ಹೂಡಿ ಕಾಮನು
ಭೇದಿಸಲಿ ನಿನ್ನೆದೆಯನು ! ೨

ಕಾದ ದೇಹದೆ ಬೆಂದ ತುಟಿಯಿಂ-
-ದೆನ್ನ ಸನಿಹಕೆ ನುಸುಳಿ ಬಾ !
ಮೃದುಳ ಭಾವದೆ ಕೋಪ ಕಳೆಯುತೆ
ನಲ್ನುಡಿಯ ನಡೆ ತೋರು ಬಾ ! ೩

ನಿನ್ನ ಮಾತಾಪಿತರುಗಳಿಗೆ
ದೂರಮಾಡಿಯೆ ಸೆಳೆವೆನು !
ಎನ್ನ ಆಣತಿ ಎನ್ನ ಮನುಕನು-
-ವರ್ತಿನಿಯ ನಾ ಮಾಳ್ಪೆನು ! ೪

ಮಿತ್ರ ವರುಣರು ಅವಳ ಹೃದಯವ,
ವ್ಯಸ್ತಗೊಳಿಸಲಿ ಚಿತ್ತವ !

ಮತ್ತೆ ಅವಳನು ಬುದ್ಧಿಹೀನಳ
ಮಾಡಿ ಎನ್ ವಶ ಮಾಡಲಿ! ೫ ೩.೨೫

ನಲ್ಲೆ ನಲ್ಲನಿಗೊಲಿದಳು ; ವಿವೇಚನೆಯನ್ನು ಕಳೆದುಕೊಂಡು ಮಂತ್ರಶಕ್ತಿ ಪ್ರಭಾವದಿಂದ ಪ್ರೇಮದ ಪುತ್ಥಳಿ ಮಾತ್ರವಾದಳು; ಹೇಳಿದೆಡೆಗೆ ಹೇಳಿದಾಗ ಬರುವಂತಾದಳು. ಆದರೆ ತಾಯಿ ತಂದೆಗಳು, ಅತ್ತಿಗೆ ನಾದಿನಿಯರು, ನೆಂಟರಿಷ್ಟರು, ಕೊನೆಗೆ ಮನೆಯ ನಾಯಿ ಇವರೆಲ್ಲರೂ ಆಕೆ ಮನೆಯಿಂದ ನುಸುಳಿಕೊಂಡು ಹೋಗುವುದನ್ನು ಕಾಣವುದಿಲ್ಲವೇ ? ಆದಕ್ಕೇನು ಪರಿಹಾರ ? ನಿದ್ರಾದೇವಿಯ ಮೋಹನ ಮಂತ್ರ!

೪.೫

ಕಡಲೊಡಲಿಂದ ಮೇಗಡೆ ಬಂದ
ಸಾವಿರ ಕೋಡಿನ ಸತ್ವದ ಬೀಡಿನ
ಬಸವನ ಬಲದಿಂದ
ಲೋಕದ ಲೋಗರ ನಿದ್ದೆಯ ಮಡಲಿಗೆ
ನೂಂಕುವೆ ಭರದಿಂದ ! ||೧||

ತಿರೆಯುರದಲ್ಲಿ ಮಾರುತ ಪರಿಯನು ;
ಕಣ್ಣುಗಳೆಲ್ಲವು ಮುಚ್ಚಿಹವು !
ಶುನಕನು ಮಲಗಲಿ ವನಿತೆಯರೆಲ್ಲ !
(ಕೈಯಲ್ಲಿರುವಮೂಲಿಕೆಗೆ)
ಇಂದ್ರನ ನೇಹವು 'ನಿನ'ಗಿರದೆ ! ||೨||

ಅಂಗಳದಲ್ಲಿ ಮಲಗಿಹರನಿಬರು,
ಮಂಗಳ ತಲ್ಪದಿ ಕೆಲರಿಹರು,
ಹೆಂಗಳೆಯರು ಕೆಲರೇನೂ ಇಲ್ಲದೆ
ಅಂಗನೆ ನಿದ್ರೆಯನಪ್ಪಿಹರು,

ಇಂತೀ ಸುಮಧುರ ಗಂಧಿನಿಯರನು
ನೂಂಕುವೆ ನಿದ್ದೆಗೆ ನಾಂ ಭರದೆ! ||೩||

ಚಲಿಸುತ್ತಿಹುದಿಲ್ಲೇನೇನಿಹುದೊ
ಚಲಿಸಿಪ ನಯನ, ಚಲಿಸಿಪ ಹರಣ,
ಪಿಡಿದೆನು! ಪಿಡಿದಿಹೆನೆಲ್ಲವ ನಾ!
ಅಂಗಾಂಗವನೂ, ಸಕಲವನನಿತನು
ಕಟ್ಟಿರುಳಲ್ಲಿಯೆ ಕಟ್ಟಿಹೆ ನಾ! ||೪||

ಕುಳಿತಿಹನಾರು? ಚಲಿಸಿಪನಾರು?
ನಿಂತೆವೆಯಿಕ್ಕದೆ ನೋಳ್ಪನದಾರು?
ಅವನವರೆಲ್ಲರ ಕಣ್ಣುಗಳ
ಸದನದ ಕದವನು ಹೊಚ್ಚುವ ಹದನದೆ
ಮುಚ್ಚಿಪೆನೀಗಳೆ ನಾಂ ಭರದೆ! ||೫||

ಮಾತೆಯು ಮಲಗಲಿ, ಪಿತನೂ ಮಲಗಲಿ,
ಮಲಗಲಿ ಸೊಸೆಯೂ, ಗೃಹಪತಿಯೂ!
ಮಲಗಲಿ ಎನ್ನಯ ನಲ್ಲೆಯ ನೆಂಟರು,
ಸುತ್ತಿನ ಮುತ್ತಿನ ಜನತತಿಯೂ! ||೬||

ನಿದ್ರಾದೇವಿಯೆ, ಮಲಗಿಸು ಸರ್ವರ
ನಿದ್ರಾಮುದ್ರೆಯಲಿ!
ಮಲಗಲಿ ನಿದ್ರಾಮುದ್ರೆಯಲೆಲ್ಲರು
ದಿನಕರ ತಾನುದಯಿಪತನಕ!
ಅನಿಷ್ಟ ಕಷ್ಟದೆ ನೋಯದ ಬೇಯದ
ಇಂದ್ರಂಗೆಣೆ ನಾನು!
ಇರ್ಪೆನು ಜಾಗ್ರತನಾಗಿಯೆ ಮಲಗದೆ
ಉಷೆಯಾ ಸಿರಿ ಮೊಗ ಕಾಂಬನಕ! ||೭||

ನಿದ್ರಾದೇವಿಯು ಲೋಕವನ್ನೇ ಮಲಗಿಸಿ ಬಿಡಬೇಕು; ಇಬ್ಬರು ಮಾತ್ರ ಎಚ್ಚರದಿಂದ ಚೆಚ್ಚರದಿಂದಿರಬೇಕು; ಇಂದ್ರಂಗೆಣೆಯಾದ ಈತ ಉಷೋದೇವಿ ಸಮಾನಸುಂದರಿಯಾದ ಆಕೆಯನ್ನು ಉಷಃಕಾಲಪರ್ಯಂತವಾದರೂ ಸರಿಯೆ ನಿರೀಕ್ಷಿಸುವನು!

ಕೆಲವು ವೇಳೆ ತರುಣಿಯೋರ್ವಳು ತರುಣನೋರ್ವನಲ್ಲಿ ಅನುರಕ್ತಳಾಗುವಳು. ಆದರೆ ಆತನಿಗೆ ಆಕೆಯಲ್ಲಿ ಪ್ರೇಮ ಅಂಕುರಿಸುವುದಿಲ್ಲ. ಅಥರ್ವವೇದದ ಬ್ರಹ್ಮನ್ ಪುರೋಹಿತನ ಮಂತ್ರ ಶಕ್ತಿಗೆ ಆಕೆ ಶರಣು ಹೋಗಬೇಕಾಯ್ತು. ಇಲ್ಲವೇ, ಸಾಧ್ಯವಿದ್ದರೆ, ತಾನೇ ಅಗ್ನಿ, ಇಂದ್ರ, ವರುಣ, ಮರುತ್ ಇತ್ಯಾದಿ ದೇವತೆಗಳನ್ನು ಪ್ರಾರ್ಥಿಸಿ ಅಪ್ಸರರ ಮಂತ್ರವನ್ನು ಜಪಿಸಬೇಕು. ಆತ ಆಕೆಯಲ್ಲಿ ಪ್ರೇಮದಿಂದ ಉನ್ಮತ್ತನಾಗಬೇಕು. ಇಂತಹ ಒಂದು ಮಂತ್ರದ ಭಾವಾನುವಾದವನ್ನು ನೋಡಿ:—(೬. ೧೩೦. ೧-೪.)

'ರಥಜಿತ'ರಪ್ಸರರ 'ರಾಥಜಿತೇಯಿ'ಗಳ
ಪ್ರೇಮದ ಮಂತ್ರವಿದು!
ಓ ದೇವತೆಗಳೆ, ಎನ್ನೀ ಪ್ರೇಮದ
ಮಂತ್ರವನು,
ಸ್ಮರ ತಂತ್ರವನು,
ಅವನಲ್ಲಿಗೆ ನೀಂ ಕಳುಹಿಪಿ ಬೇಗನೆ,
ಬೇಯಲಿ ಎನ್ನನುರಾಗದಲಿ! ॥ ೧ ॥

ಎನ್ನನೆ ನೆನೆಯಲಿ ಎನ್ನಯ ನಲ್ಲನು!
ನೆನೆಯಲಿ ಎನ್ನನ್ನೆ!
ಓ ದೇವತೆಗಳೆ, ಎನ್ನೀ ಪ್ರೇಮದ

ಮಂತ್ರವನು,
ಸ್ಮರತಂತ್ರವನು,
ಅವನಲ್ಲಿಗೆ ನೀಂ ಕಳುಹಿಪಿ ಬೇಗನೆ,
ಎನ್ನ 'ನುಶೋಚಿಸು' ತಿರಲವನು ! ॥ ೨ ॥

ಎಂದೆಂದೂ ಅವನೆನ್ನನು ನೆನೆಯಲಿ !
ನೆನೆಯನು ನಾನವನೆಂದೆಂದೂ!
ಓ ದೇವತೆಗಳೆ, ಎನ್ನೀ ಪ್ರೇಮದ
ಮಂತ್ರವನು,
ಸ್ಮರ ತಂತ್ರವನು,
ಅವನಲ್ಲಿಗೆ ನೀಂ ಕಳುಹಿಪಿ ಬೇಗನೆ,
ಬೇಯಲಿ ಎನ್ನನುರಾಗದಲಿ ! ॥ ೩ ॥

ಮರುತನೆ ಅವನನು ಹುಚ್ಚಾಗಿಸು ನೀ !
ಮಾಡುನ್ಮತ್ತನ ಆಗಸ ದೇವನೆ!
ಮಾಡುನ್ಮತ್ತನ ಅಗ್ನಿಯೆ ನೀನು !
ಎನ್ನ 'ನುಶೋಚಿಸು' ತಿರಲವನು ! ॥ ೪ ॥

ಸ್ಮರ ತಾಪವಾವುದನು ತೋಯುಗರ್ಭದಲಿ
ದೇವತೆಗಳೆಲ್ಲರೂ ಹುದುಗಿಸಿಟ್ಟಿಹರೊ
ನಿನಗಾಗಿ ನಾನಿಂದು ಆ ಮಂತ್ರವನ್ನು
ವರುಣನಾಣತಿ ಹೊತ್ತು ಕಾಯಿಸುತ್ತಿಹೆನು! ೬.೧೩೨.೧.

**ದಾಂಪತ್ಯಜೀವನ :** ಈ ರೀತಿ ತರುಣ ತರುಣಿಯರು ತಮ್ಮ ಮನವೊಪ್ಪಿದ ದಯಿತ ಜನವನ್ನು ಒಲಿಸಿಕೊಂಡ ಮೇಲೆ ಲೋಕಮೆಚ್ಚುಗೆಗಾಗಿ ಹಿರಿಯರ ಮೂಲಕ ಮಾಡಿಸಬೇಕಾದ ಕಾರ್ಯವೊಂದು—ಲಗ್ನವೊಂದು—ಉಳಿದಿರುತ್ತದೆ. ತಮ್ಮ ಸ್ನೇಹಿತರನ್ನೋ, ಹಿರಿಯರನ್ನೋ ಕನ್ಯೆಯ ಯಾ ವರನ ಮನೆಗೆ

ಕಳುಹಿಸಿ, ಒಪ್ಪಿಸಿ ಮದುವೆಯಾಗುವುದು. ವಧೂವರರು ನಾನಾ ವರ್ಣದ, ಚಿತ್ತಾಕರ್ಷಕ ಉಡುಪುಗಳನ್ನು ಧರಿಸಿ ಮೆರವಣಿಗೆಯಲ್ಲಿ ಬರುವರು. ಮನೆದುಂಬಿಸಿಕೊಂಡುದೂ ಆಗುವುದು. ಬಂದ ಸೊಸೆ ಮನೆಗೆ ರಾಣಿ. ಮಾವನನ್ನು ಕಂಡರೆ ಮಾತ್ರ ಭಯ, ಭಕ್ತಿ. ದಾಂಪತ್ಯಜೀವನ ಆನಂದಮಯವಾಗುವುದು; ಸ್ವರ್ಗೀಯವಾಗುವುದು. ಮಧುರ ಪ್ರೇಮದರ್ಶನವನ್ನು ವಿಶ್ವಸತ್ಯಕ್ಕೆ ಸಮನಪ್ಪಂತೆ ಬದುಕಿ, ಬಾಳಿ ತೋರಿಸುವರು. "ಪೂರ್ಣತೆಯ ಎರಡು ಅರ್ಧಗಳು" ತಾವೆಂದು, ಇವ್ಯೋಗ ಪಡೆದ ಏಕೈಕ ಪ್ರೇಮ ತಾವೆಂದು ನಲ್ಲನಲ್ಲೆಯರು ಕೂಡಿ ಹಾಡುವರು. ವೈವಾಹಿಕ ಕಾಂಡದ ಗೀತೆಯೊಂದನ್ನು ಕೇಳಿ:

'ಅವನು' ನಾನು, 'ಅವಳು' ನೀನು,
'ಅವನುಮವಳು ನಾವೆಲಾ!
ಸಾಮ ನಾನು, ಋಕ್ಕು ನೀನು,
'ಗಾನ ಗೇಯ' ನಾವೆಲಾ!
ದಿವಿಯು ನಾನು, ಬುವಿಯು ನೀನು,
ದಿವಿಬುವಿಗಳು ನಾವೆಲಾ!
ಜತೆಯ ಬಾಳ್ವೆಯಿಂತು ಬದುಕಿ
ಸುತರ ನಾವು ಪಡೆವೆವಾ!! ೧೪. ೨. ೭೧.

ಎಂತಹ ಭವ್ಯ, ಸುಂದರ ಪೂರ್ಣತೆಯ ದೃಶ್ಯವಿದು! ಎಂತಹ ಸಮರಸದ ಜೀವನವಿದು! "ಪ್ರೇಮದರ್ಶನವು" ವ್ಯಕ್ತಿಗಳ ಆತ್ಮದಿಂದ ಮಥಿಸಿ ಕಡೆದು ಒಡಮೂಡಿಸುವ ವಿಶ್ವಾತ್ಮದರ್ಶನವನ್ನು ನಾವಿಲ್ಲಿ ಕಾಣುತ್ತೇವೆ.

**ಹೆಣ್ಣು ಬೇಡ - ಗಂಡಾಗಲಿ :** ಇಂತಹ ಆದರ್ಶ ದಂಪತಿಗಳು ತಮ್ಮ ಮಧುರ ದಾಂಪತ್ಯ ಜೀವನವೃಕ್ಷದ ತನಿವಣ್ಣು ಗಂಡಾಗಲೆಂದೇ ಹರಕೆ ಹಾಕುವರು. ಹೆಣ್ಣು ಬೇಡವೇಬೇಡ.

'ಪ್ರಜೆಗಳಿಗೆ ಪತಿ'ಯವನು 'ಅನುಮಿತಿಯು', 'ಸಿನಿವಾಲಿ'
ಅವನು ಈ ಎಲ್ಲವನು ಸೃಷ್ಟಿಸಿಹನು;
ಪೆಣ್ಣು ಜನ್ಮವನವನು ಕುಡುಗೆ ಬೇರೊಂದೆಡೆಗೆ!
ಗಂಡುಜನ್ಮವನವನು ಇಲ್ಲಿ ಕೊಡಲಿ! ೬.೧೧.೩.

ಮಿತ್ರವರುಣರು, ಇಂದ್ರಾಗ್ನಿಗಳು, ಪ್ರಜಾಪತಿ, ಧಾತೃ, ತ್ವಷ್ಟೃ, ಸವಿತೃ ಎಲ್ಲರೂ ಸ್ಫುರದ್ರೂಪಿಯಾದ ಗಂಡುಮಗುವನ್ನೇ ತನ್ನ ಪತ್ನಿಯ ಗರ್ಭದಲ್ಲಿಡಬೇಕೆಂದು ಪತಿಯ ಪ್ರಾರ್ಥನೆ. (೫.೨೫) ಆ ಮಗು ಪರಿಪುಷ್ಟನಾಗಿ ಹತ್ತನೇ ತಿಂಗಳಲ್ಲಿ ಹುಟ್ಟಬೇಕು.

ಸವಿತಃ ಶ್ರೇಷ್ಠೇನ ರೂಪೇಣಾಸ್ಯಾ ನಾರ್ಯಾ
ಗವೀನ್ಯೋಃ।
ಪುಮಾಂಸಂ ಪುತ್ರಮಾ ಧೇಹಿ ದಶಮೇ ಮಾಸಿ
ಸೂತವೇ ೫.೨೫.೧೨

ಗಂಡಾದರೆ ಸರಿ, ಎಷ್ಟಾದರೂ ನಿರ್ಯೋಚನೆ:

ನಿನ್ನ ಬಸುರಿಗೆ ಗಂಡು ಗರ್ಭವದು ಪುಗಲಿ
ಇಷುಧಿಯೊಳು ಬಾಣ ತಾಂ ಪುಗುವ ತೆರದೆ!
ಗಂಡು ಮಗುವಿಗೆ, ನೀನು ಜನ್ಮಕೊಡು ಪುತ್ರಂಗೆ!
ಆ ಮಗುವಿನನುಜಾತ ಗಂಡಾಗಲಿ! ೩.೨೩.೩

ಗಂಧರ್ವರು, ಅಪ್ಸರರು ಇತ್ಯಾದಿ ದುಷ್ಟಶಕ್ತಿಗಳು ಗಂಡನ್ನು ಹೆಣ್ಣಾಗಿಸಿಬಿಟ್ಟಾರೆಂದು ಪುರೋಹಿತರನ್ನು ಕರೆಸಿ ಅನಿಷ್ಟ ನಿವಾರಣೆಯ ಮುಂಜಾಗ್ರತಾಕ್ರಮವನ್ನೂ ದಂಪತಿಗಳು ಮಾಡಿಯೇ ಬಿಡುತ್ತಿದ್ದರು.

ಹೆಣ್ಣು ಮಕ್ಕಳನ್ನು ಹಡೆದ ತಾಯಿತಂದೆಗಳಿಗೆ ಸಂಕಟ ತಪ್ಪಿದ್ದಲ್ಲ. ವರಾನ್ವೇಷಣಾಕಷ್ಟಗೃಧ್ರ ಅಥರ್ವವೇದದ ಕಾಲ

ದಲ್ಲೇ ಮುರಿಯೊಡೆಸಿತ್ತು. ಪಾಪ! ಹೆಣ್ಣು ಹೆತ್ತ ಆ ಪಿತೃಗಳು ಕೈಯಲ್ಲೊಂದು ಬೇರು ಹಿಡಿದುಕೊಂಡು ಏನೇನೋ ಜಪಿಸುತ್ತಾ ಕಂಡ ಕಂಡ ದೇವತೆಗಳಿಗೆಲ್ಲಾ ಕೈಮುಗಿಯುತ್ತಿದ್ದರು. "ಅಗ್ನಿಯೇ, ಸವಿತೃವೇ, ಈ ನಮ್ಮ–ಬೆಳೆದು ಮದುವೆಗೆ ಬಂದಿರುವ–ಮಗಳಿಗೆ ವರಸಿಗಲಿ. ಎಲ್ಲರಿಗೂ ಆಕೆ ಜುಷ್ಟೆ (ಮೆಚ್ಚು) ಯಾಗಿದ್ದಾಳೆ. ಸಮನ (ವಿಶೇಷ ಕೂಟ) ಗಳಲ್ಲಿ ಆಕೆಯನ್ನು ಹೊಗಳಿದ್ದಾರೆ. ಆಕೆಗೆ ಪತಿ ಸೌಭಾಗ್ಯ ದೊರೆಯಲಿ" ಎಂದು ಹಲವು ವಿಧವಾಗಿ ಹಲುಬುತ್ತಿದ್ದರು. (೨.೩೬) ಅಗ್ನಿ ಸವಿತೃಗಳು ತಾನೆ ಅವರಿಗೆ ಬೆಳಕೀಯಬೇಕು!

**ಷೋಡಶಕರ್ಮಗಳು :—**ಹುಟ್ಟಿದ ಮಗುವಿಗೆ ಜಾತಕರ್ಮ, ನಾಮಕರಣ (೮.೨) ಅನಿಷ್ಟ ನಿವಾರಣ (೬.೧೪೦. ಹಲ್ಲು ಬರುವಾಗ) ನಿರ್ಣಯನ, ಮೇಖಲಾ (ಉಡಿದಾರ) ಧಾರಣ (೬.೧೩೩) ಅನ್ನಪ್ರಾಶನ, ಗೋದಾನ (೬.೫೩, ೬.೫೮) ಉಪನಯನ (೭.೫೩; ೧.೯; ೧೩೦) ಮುಂತಾದ ಕರ್ಮಗಳನ್ನು ಮಾಡುವುದು ರೂಢಿಯಲ್ಲಿತ್ತು. ಇದೇ ರೀತಿ ವಿವಾಹ, ಗರ್ಭಾದಾನ, ಪುಂಸವನ, ಪಿತೃಮೇಧ (ಉತ್ತರ ಕ್ರಿಯೆ) ಇತ್ಯಾದಿ ಷೋಡಶ ಕರ್ಮಗಳೆಲ್ಲವೂ ಅಥರ್ವವೇದೋಕ್ತವಾಗಿದ್ದು "ಅಥರ್ವವೇದವು ಗೃಹ್ಯಧರ್ಮಗಳ ಖನಿ" ಎಂಬ ವಿಮರ್ಶಕರ ಅಭಿಪ್ರಾಯ ಅಕ್ಷರಶಃ ಸತ್ಯವಾಗಿದೆ.

**ಪಶು ಪ್ರಾಣಿಗಳಲ್ಲಿ ದಯೆ, ಅವುಗಳ ಪೋಷಣೆ :** ಅಥರ್ವವೇದದ ನೇಗಿಲಯೋಗಿ ಒಕ್ಕಲಿಗ ತನಗೆ ಗಂಡು ಮಗುವಾಗಲಿ; ಆತ ವಜ್ರಕಾಯನಾಗಲಿ; ದೀರ್ಘಾಯುವಾಗಲಿ; ನೀರೋಗಿಯಾಗಿ ಜರಾಮೃತ್ಯುವನ್ನು ಪಡೆಯಲಿ

ಎಂದು ಬಯಸುತ್ತಿದ್ದ ಹಾಗೆಯೇ, ಹಗಲಿರುಳು ತನ್ನನ್ನೇ ನಂಬಿ ತನ್ನ ಸೇವೆಯನ್ನೇ ಮಾಡುತ್ತಿದ್ದ ಹಸುಗಳು, ಕುದುರೆಗಳು ಮುಂತಾದುವುಗಳಿಗೂ ಬಲವರ್ಧಿಸಲಿ (ವಾಜೀಕರಣ); ಮೇವಿಗಾಗಿ ಮಳೆರಾಯ ಮಳೆಗರೆಯಲಿ (೪.೧೫); ಕರು ಹಾಕಿದ ಆಕಳಿಗೆ ಶುಭವಾಗಲಿ (೬.೭) ಎಂದು ದೇವತೆಗಳನ್ನು ಪ್ರಾರ್ಥಿಸುವನು. ಅವುಗಳು ಕಣ್ಣಿಗೆ ಕತ್ತಲೆಯಾಗುವುದಕ್ಕೆ ಮೊದಲೇ ದೊಡ್ಡಿಗೆ ಬರಲಿ (೬.೭೬) ಎಂದು ಜಾತವೇದನನ್ನು ನುತಿಸಿ ಪ್ರಾರ್ಥಿಸುವನು; ಅವುಗಳಿಗೆ ರೋಗ ಬಂದರೆ ಉಪ್ಪಿನ ನೀರನ್ನು ಕುಡಿಸುವನು; ಶರೀರದಲ್ಲಿ ಕ್ರಿಮಿಗಳು ಸೇರಿಕೊಂಡಿದ್ದರೆ ಅದಕ್ಕೆ ಚಿಕಿತ್ಸೆ ಮಾಡುವನು; ಕೆಲವು ಖಾಯಿಲೆ ಬಂದಾಗ ಕಿವಿಯನ್ನು ಸ್ವಲ್ಪ ಗೀಳುವನು ಇಲ್ಲವೇ ಕತ್ತರಿಸುವನು (೬.೧೪೧).

**ಸುಗ್ಗಿಯ ಸೊಬಗು :** ಹೊಲವನ್ನು ಬಿತ್ತಿ 'ಯವ'ವೋ 'ವ್ರೀಹಿ'ಯೋ ದಳಸಾಗಿ ಬೆಳೆದು ಕುಡುಗೋಲಿಗೆ ಅಡವಾಗಿ ಸಿಕ್ಕುವಂತಾಯಿತು; ಕೃತಜ್ಞತೆಯಿಂದ ದೈವಭಕ್ತಿ ಉಕ್ಕಿ ಬಂತು; ಮನವು ಭಾವಕ್ಕೆ ಪಕ್ಕಾಯಿತು; ರಸವೊಸರುವ ಸವಿನುಡಿಗಳು ದೈವಭಕ್ತಿಯೆಂಬ ಬಂಡುಂಬ ಅಳಿವಿಂಡುಗಳಾದುವು. ಕವಿಯೇ ನುಡಿಯಲಿ. (೩.೨೪.೧-೭)

ತುಂಬಿದೆ ಪಯವೀ ಧಾನ್ಯಗಳಲ್ಲಿ !
ತುಂಬಿದೆ ಪಯವೆನ್ ವಚನಗಳಲ್ಲಿ !
ಇಂತೀ ಬಗೆಯಾ ಪಯಪೂರಿತಗಳ
ಸಾಸಿರ ಸಾಸಿರ ತಂದಪೆನಿಲ್ಲಿ ! ೧
ದೇವನದಾವನು ಈ ಧಾನ್ಯಗಳನು
ಹೆಚ್ಚಳಗೈದನೊ 'ಪಯಸ್ವಿನಿ'ಗಳನು !

ಅವನಂ ಬಲ್ಲೆನು 'ಸಂಭೃತ'ನೆಂಬನ !
　　ಕರೆವೆ 'ನಯಜ್ವನ' ಗೃಹದಿಂದ ! ೨

ಸುಗ್ಗಿಯ ಹಿಗ್ಗನ್ನಿತ್ತ ದೇವನೇ, ನೀನು ನನ್ನ ಮನೆಗೆ ಬಾ. ದೈವಭಕ್ತನಲ್ಲದವನ (ಅಯಜ್ವನ್) ಮನೆ ನಿನಗೆ ಸಲ್ಲ" ಎಂದು ಬೇಡಿಕೊಳ್ಳುವನು.

ಒಕ್ಕಣೆಯಾಯಿತು. ಧಾನ್ಯ ರಾಶಿರಾಶಿಯಾಗಿ ಕಣದಲ್ಲಿದೆ. ಅಲ್ಲೀ ಅದು ನ್ಯಾಯವಾಗಿ ಹಂಚಿಕೆಯಾಗಬೇಕು. ದೇವನಾಶೀರ್ವಾದದಿಂದ ಸುಗ್ಗಿಯ "ಹೆಚ್ಚಳ" ಉಂಟಾಗಿದೆ. ದೇವನಿಗೂ ಪಾಲು ! ಗೃಹಪತಿಗೂ ಪಾಲು! (೨. ೨೪. ೩-೭).

ದಿಶೆಗಳು ಐದು, ಮನುಕುಲವೈದು,
　　ವರ್ಷಾಕಾಲದೆ ಬಿರುವಳೆ ಹೊಯ್ದು,
ಅಂಭಃ ಪೂರವ ತೊರೆ ತರುವಂತೆ
　　ಸುಗ್ಗಿಯ ಹಿಗ್ಗನು ಸಲೆ ತರಲಿಲ್ಲಿ ! ೩

ಶತಧಾರೆಯು ಮೇಣ್ ಸಹಸ್ರ ಧಾರೆಗ-
　　ಳನ್ನಸು ಸುರಿಸುವ ಊಟೆಯು ತೆರೆಯಲಿ !
ಅಂತೀ ನಮ್ಮಯ ಧಾನ್ಯಗಳನ್ನು
　　ಶತಧಾರೆಗಳಿಂ ಹೆಚ್ಚಳಗೈಯಿರಿ ! ೪

'ಶತಹಸ್ತ'ನೆ ನೀ ರಾಶಿಯ ಹಾಕು !
　　'ಸಹಸ್ರಹಸ್ತ'ನೆ ಸುರಿ ಸುರಿ ನೀನು !
ಒಕ್ಕಿದ ಧಾನ್ಯವನೊಕ್ಕುವ ಧಾನ್ಯವ
　　ಹೆಚ್ಚಳ ಗೈಯುತೆ ತನ್ನಿರಿ ಇಲ್ಲಿ ! ೫

'ಮೂಗಳ' ಪೋಪುದು ಗಂಧರ್ವರಿಗೆ !
　　'ನಾಗಳ' ಪೋಪುದು ಗೃಹಪತಿಗೆ !

ಇಂತೀ ಹಿಸ್ಸೆಯುಲಾವುದು ಹೆಚ್ಚೊ
ಅದ ತಂದಿಡುವೆವು ನಿನ್ನಡಿಗೆ ! ೬
ಹೆಚ್ಚಳಗೈವನು ರಾಶಿಯ ಗೈವನು
ನಿನ್ನೊಕ್ಕಲಿಗರು, ' ಜನಪತಿ 'ಯೆ,
ಅಕ್ಷಯವಾಗಿಹ ಭೂಮುವದಾಗಿಹ
ಸುಗ್ಗಿಯ ಹೆಚ್ಚಳ ತರಲಿಲ್ಲಿ ! ೭

**ಕೃಷಿನಾಶಿನಿಗಳ ಪರಿಹಾರ :** ವ್ಯವಸಾಯ ಮತ್ತು ಪಶು ಪಾಲನೆಯೇ ಮುಖ್ಯ ಕಸಬಾಗಿದ್ದುದರಿಂದ ಪಶು ಸಂರಕ್ಷಣೆಯ ಕಡೆಗೆ ಗಮನ ಕೊಡುತ್ತಿದ್ದಂತೆಯೇ ತಮ್ಮ ಬೆಳಸು ತೃಪ್ತಿಕರ ವಾಗಿರಬೇಕು; ಫಲದಾಯಕವಾಗಿರಬೇಕು; ಅದು ಅತಿವೃಷ್ಟಿ, ಅನಾವೃಷ್ಟಿ, ಆಲಿಕಲ್ಲು ಮಳೆ ಇತ್ಯಾದಿಗಳಿಂದಲೂ ತರ್ದ (ಸುಂಡ), ಸಮಜ್ಕ (ಕೊರೆಯುವ ಪ್ರಾಣಿಯೊಂದು) ಶಲಭ (ಮಿಡತೆ), ಟಿಟ್ಟಭ (ಒಂದು ಪಕ್ಷಿ), ಹರಿಣ (ಜಿಂಕೆಗಳು), ಶಲ್ಯಕ (ಓತಿ), ಗೋಧಾ (ಅದೇ ಜಾತಿಗೆ ಸೇರಿದ ಇನ್ನೊಂದು) ಮುಂತಾದ ಪ್ರಾಣಿಗಳಿಂದಲೂ ಆಗುತ್ತಿದ್ದ ನಷ್ಟವನ್ನು ತಪ್ಪಿಸ ಬೇಕೆಂದು ದೈವಿಕ ಶಕ್ತಿಯನ್ನು ಪ್ರಾರ್ಥಿಸುತ್ತಿದ್ದರು. ವ್ಯವಸಾಯಕ್ಕಾಗಿ ನಾಲೆಗಳನ್ನೂ ಕೆರೆಗಳನ್ನೂ ಮಾಡಿಕೊಂಡಿದ್ದರೆಂದು (೩.೧೩) ತಿಳಿದುಬರುತ್ತದೆ.

**ಭೂದೇವಿಯಲ್ಲಿ ಭಕ್ತಿ :** ಮಣ್ಣಿನಲ್ಲಿ ಹುಟ್ಟಿ ಮಣ್ಣಿನಲ್ಲಿ ಬೆಳೆದ ಸಸ್ಯಗಳು ಮತ್ತು ಪ್ರಾಣಿಗಳಿಂದ ಬದುಕುತ್ತಿದ್ದ ಈ ಮಣ್ಣಿನ ಮಕ್ಕಳು (ಮಾತಾ ಭೂಮಿಃ, ಪುತ್ರೋಽಹಂ ಪೃಥಿವ್ಯಾಃ) ಭೂಮಾತೆಯನ್ನು ಮುಕ್ತಕಂಠದಿಂದ ಸ್ತುತಿಗೈದರು. (೧೨.೧)

ಸತ್ಯ, ಋತ, ತಪಸ್ಸು, ಬ್ರಹ್ಮ ಮತ್ತು ಯಜ್ಞ ಇವುಗಳು

ಪೃಥಿವಿಯನ್ನು ಧಾರಣಮಾಡಿವೆ; ಭೂತಭವಿಷ್ಯತ್ತುಗಳಿಗೆಲ್ಲ ಆಕೆಯೇ ಕಾರಣಳು; ವೀರ್ಯವತ್ತಾದ ಔಷಧಿಗಳು, ನದಿಗಳು, ಸಮುದ್ರಗಳು, ಹುಟ್ಟಿ ಚಲಿಸುತ್ತಿರುವ ಏನೇನಿದೆಯೋ ಎಲ್ಲವೂ ಆಕೆಯ ವಕ್ಷಸ್ಥಲದಲ್ಲಿವೆ; ಆಕೆ ವಿಶ್ವಂಭರೆ, ವಸುಧಾನೀ, ಪ್ರತಿಷ್ಠೆ, ಹಿರಣ್ಯವಕ್ಷೆ, ವಿಶ್ವರೂಪೆ, ಧೃವೆ, ವಿಚಿತ್ರವರ್ಣೆ; ಆಕೆ ಮಾತೆ ಮಗನಿಗೆ ಮೊಲೆಯೂಡಿಸಂತೆ ಪಯುವನ್ನು ದಾನ ಮಾಡುವಳು; (ಸಾ ನೋ ಭೂಮಿರ್ವಿಸೃಜತಾಂ ಮಾತಾ ಪುತ್ರಾಯ ಮೇ ಪಯಃ). ಭೂಮಾತೆ ಪ್ರಾಣದಾಯಿನೀ, ಆಯುರ್ದಾಯಿನೀ; ಆಕೆ ಸರ್ವಸ್ವವೂ! ಇಂತಹ ಭೂಮಾತೆ ಮಣ್ಣಿಣಿ ನೇಗಿಲ ಯೋಗಿಯನ್ನು ಸುಸ್ಥಿತನನ್ನಾಗಿ ಮಾಡ ಬೇಕು. (ಭೂಮೇ ಮಾತರ್ನಿ ಧೇಹಿ ಮಾ ಭದ್ರಯಾ ಸುಪ್ರ ತಿಷ್ಠಿತಮ್).

**ವಾಣಿಜ್ಯ:** ವ್ಯಾಪಾರದಲ್ಲೂ ನಿರತರಾದವರು ಹಲವರಿದ್ದರು. ವಾಣಿಜ್ಯದಲ್ಲಿ ಜಯ ದೊರೆಯಲೆಂದು (೩.೧೫) ಇಂದ್ರ, ಅಗ್ನಿ, ಸೋಮ, ವರುಣ, ಪ್ರಜಾಪತಿ ಮುಂತಾದ ದೇವತೆಗಳನ್ನು ಅವರು ಪ್ರಾರ್ಥಿಸುತ್ತಿದ್ದರು. ವೈರಿಗಳನ್ನು, ದಾರಿಗಳ್ಳರನ್ನು (ಪರಿಪಂಥಿನಃ) ಪರಿಹರಿಸಬೇಕು; ಕೊಳ್ಳುವುದು ಲಾಭದಾ ಯಕವಾಗಿರಬೇಕು (ಯಥಾ ಕ್ರೀತ್ವಾ ಧನಮಾಹರಾಣಿ); ನೂರ್ಮಡಿಯಾಗಬೇಕು (ಶತಸೇಯಾಯ).

ಯೇನ ಧನೇನ ಪ್ರಪಣಂ ಚರಾಮಿ
ಧನೇನ ದೇವಾ ಧನಮಿಚ್ಛಮಾನಃ।
ತನ್ಮೇ ಭೂಯೋ ಭವತು ಮಾ ಕನೀಯೋ . . . . ||

೩-೧೫.೫

ಹಣದಾಶೆಯಿಂದ, ಯಾವ ಹಣವನ್ನು ಹಾಕಿ ನಾನು ವ್ಯಾಪಾರ

ಮಾಡುವೆನೋ ಅದರಿಂದ ನನಗೆ ಹೆಚ್ಚು ಹಣ ಬರಲಿ; ಕಡಿಮೆ ಯಾಗದಿರಲಿ.

ಇದೇ ರೀತಿ ಸುಖವಾದ ಶುಭವಾದ ಪ್ರಯಾಣವಾಗಲಿ; ರಕ್ಷಣೆಯೊದಗಲಿ (೩.೩೬ ; ೨.೨೭) ಎಂದೂ ಸಹ ಪ್ರಾರ್ಥಿಸುವ ಸೂಕ್ತಗಳು ಹಲವಿವೆ.

**ಸ್ತ್ರೀಯರ ಸ್ಥಿತಿಗತಿಗಳು :** ಮೇಲೆ ತಿಳಿಸಿರುವಂತೆ ಅಥರ್ವ ವೇದದ ಕಾಲದಲ್ಲಿ ಹೆಂಗಸರಿಗೆ ಉಚಿತವಾದ ಮರ್ಯಾದೆ ಯಿದ್ದರೂ, ಆಕೆ ಮನೆಯ ರಾಣಿಯಾಗಿದ್ದರೂ ಕೆಲವು ಸಂದರ್ಭಗಳಲ್ಲಿ ಅವರಿಗೆ ಕಷ್ಟಕಾರ್ಪಣ್ಯಗಳು ಇದ್ದೇ ಇರು ತ್ತಿದ್ದವು. ಹೆಣ್ಣು ಮಗುವಿನ ಜನನವನ್ನೇ ತಾಯಿತಂದೆಗಳು ಬಯಸುತ್ತಿರಲಿಲ್ಲ. ಆಕೆ ಎಷ್ಟೋ ಸುಂದರಿಯಾಗಿದ್ದರೂ 'ಸಮನ' ಗಳಲ್ಲಿ 'ಜುಷ್ಟೆ' (ಮೆಚ್ಚು) ಯಾಗಿದ್ದರೂ ವರ ಸಿಗುವುದು ಕಷ್ಟವಾಗಿತ್ತು. ಜತೆಗೆ ಬಹುಪತ್ನೀಪದ್ಧತಿಯೂ ರೂಢಿಯಲ್ಲಿತ್ತು. ಆದುದರಿಂದ ಸಪತ್ನಿಯರಲ್ಲಿ ದ್ವೇಷಹಾಲಾ ಹಲವು ಹೊಗೆಯಾಡುತ್ತಲೇ ಇತ್ತು. ಒಬ್ಬಳು ತನ್ನ ಸವತಿ ಯನ್ನು, ಆಕೆಯ ಭಾಗ್ಯವನ್ನು, ಯಶಸ್ಸನ್ನು ಮತ್ತು ಸೌಂದ ರ್ಯವನ್ನು ನಾಶಪಡಿಸಲು ಹವಣಿಸುವಳು; ಮಾಟಮಾಡು ವಳು; ಆಕೆ ನೆಂಟರಲ್ಲಿ, ತಂದೆಯ ಮನೆಯಲ್ಲಿ, ಸಹೋದರರ ಮನೆಯಲ್ಲಿ ಮುದಿಯಾಗುವತನಕ—ನರೆಗೂದಲು ಮೂಡುವ ತನಕವೂ—ಅಲ್ಲಾಡದೆ ಬೆಟ್ಟದಂತೆ ಕುಳಿತಿರಬೇಕು; ಇಲ್ಲವೇ ಯಮರಾಜನ ರಾಣಿಯರಲ್ಲಿ ಒಬ್ಬಳಾಗಬೇಕು. ಅಣ್ಣ ತಮ್ಮಂದಿರಿಲ್ಲದ ಹೆಣ್ಣಿನ ಬದುಕು ಬದುಕಲ್ಲ. ಅಳಿಯನಿಗೆ ಬಳುವಳಿ ಕೊಡುವುದು ರೂಢಿಯಲ್ಲಿತ್ತು. ಮದುವೆಯ ಮಂಟ ಪಕ್ಕೆ ಹೆಣ್ಣನ್ನು ಪರದೆಹೊದಿಸಿಕೊಂಡು ಕರೆತರುತ್ತಿದ್ದರು.

ವಿಧವಾ ವಿವಾಹವು ರೂಢಿಯಲ್ಲಿತ್ತು. ಸಹಗಮನ ಪದ್ಧತಿ ಯಿತ್ತೆಂದು ನಿಖರವಾಗಿ ಹೇಳುವಂತಿಲ್ಲ. ಪತಿ ಸತ್ತರೆ ಅವನ ಶವದ ಪಕ್ಕದಲ್ಲಿ ಸತಿ ಮಲಗಿದ್ದು ಮೇಲೇಳುವಳು (೧೮.೩.೧). ಯಾವಾತನು ಆಕೆಯ ಕೈಹಿಡಿದು ಮೇಲೆಬ್ಬಿಸುವನೋ ಆತನೇ ಆಕೆಯ ಮುಂದಿನ ಪತಿ. (೧೮.೩.೨).

ಕೆಲವು ವೇಳೆ ಏನು ಕಾರಣವೋ ಪತಿ ಓಡಿಹೋಗುವನು! ಸತಿ ದಿಕ್ಕುಗಾಣದೆ ಒಂಟಿಯಾಗಿ ಹಂಬಲಿಸಬೇಕಾಗುವುದು. ಆದರೂ ಓಡಿಹೋದ ತನ್ನ ಪತಿಯನ್ನು ಮತ್ತೆ ಕರೆಯಲು ಪ್ರಯತ್ನಿಸುವಳು. ಅದಕ್ಕೆ ಆತನಲ್ಲಿ ವಿರಹತಾಪದುರಿಯ ಉರುಬು ಹೆಚ್ಚಿದರೆ ಸಾಕು!

ಮುಡಿಯಿಂದ ಹಿಮ್ಮಡಿಯ ವರೆಗೆ
ಮದನ ಸಂತಾಪವನು ಬರಿಪೆ ನಿನಗೆ!
ಕಳುಹಿರೀ ಮಂತ್ರವನು ದೇವತೆಗಳೆ,
ಅನುರಾಗದಿಂದವನು ಬೆಂಬೇಯಲಿ! ೬. ೧೩೧. ೧.

ಮೂರು ಯೋಜನ ದೂರ ಓಡಿದರು ನೀನು!
ಐದು ಯೋಜನ-ಕುದುರೆಯೊಂದುದಿನದೋಟ!
ಅಲ್ಲಿಂದ ಕರೆಸುವೆನು, ಬಿಡೆ ನಿನ್ನ ನಾನು!
ಮಾಳ್ಪೆ ನಿನ್ನೆಮ್ಮ ಸುತರಿಂಗೆ ಪಿತನನ್ನು! ೩.

ಸತ್ತವರನ್ನು ಹೂಳುವುದು, ಸುಡುವುದು ಎರಡೂ ರೂಢಿಯಲ್ಲಿ ದ್ದುವು. ಆದರೆ ಸುಡುವುದು ಹೆಚ್ಚು ಪ್ರಚಾರದಲ್ಲಿತ್ತು. ಸತ್ತ ವರು-ಅತ್ಯುಚ್ಚಲೋಕಕ್ಕೆ, ಸ್ವರ್ಗಕ್ಕೆ - ಯಮರಾಜನಿರುವೆಡೆಗೆ ಹೋಗುವರೆಂಬ ನಂಬುಗೆ ಇತ್ತು. ನರಕದ ಭಾವನೆ ಬೆಳೆ ದಿತ್ತಾದರೂ (೧೨-೪-೩೬) ಯಮನಿರುವಲ್ಲಿ ನರಕವಿರಲಿಲ್ಲ. ಯಮ ನರಕದೊಡೆಯನಲ್ಲ.

ಗೂಗೆ, ಪಾರಿವಾಳ ಮುಂತಾದ ಪಕ್ಷಿಗಳು ಮನೆ ಹೊಕ್ಕರೆ ಅಪಶಕುನ. ಅವಳಿ ಜವಳಿ (ಯಮಳ) ಹುಟ್ಟುವುದು ಅಪಶಕುನ. ಕಪ್ಪುಹಲ್ಲು, ಕಪ್ಪು ಉಗುರು ಇರುವವರು ಪಾಪಿಗಳು ! ನಿಂತು ಮೂತ್ರ ಮೋಚನಮಾಡುವುದೂ ಪಾಪ. ಹೊತ್ತು ಹುಟ್ಟಿದ ಮೇಲೆ ಮಲಗುವುದು ಪಾಪ.

ಅತಿಥಿ ಸತ್ಕಾರಕ್ಕೆ ಮಹಾ ಮಹಾ ಯಾಗಗಳನ್ನು ಮಾಡಿದಷ್ಟು ಬೆಲೆಯಿತ್ತು. ಪಂಚ ಮಹಾಯಜ್ಞಗಳಲ್ಲಿ ಒಂದಾದ 'ಅತಿಥಿಯಜ್ಞ' ವನ್ನು ಬೋಧಿಸಿದ ಕೀರ್ತಿ ಅಥರ್ವವೇದಕ್ಕೇ ಮೀಸಲು !

## ೫. ಅಥರ್ವ ವೇದದಲ್ಲಿ ರಾಜನೀತಿ.

ಅಥರ್ವವೇದವನ್ನು 'ಕ್ಷತ್ರವೇದ' ವೆಂದೂ ಕರೆಯುವರು. (ಶತಪಥ ಬ್ರಾಹ್ಮಣ. ೧೪–೮–೧೪) ರಾಜ ನೀತಿಗೆ ಸಂಬಂಧಪಟ್ಟ 'ರಾಜ ಕರ್ಮಾಣಿ' ಎಂಬ ಹಲವು ಸೂಕ್ತಗಳು ಅಂದಿನ ರಾಜನೀತಿಯ ಪೂರ್ಣ ಚಿತ್ರವನ್ನು ನಮ್ಮ ಮುಂದಿಡುತ್ತವೆ.

ಅಥರ್ವವೇದದ ಕಾಲದಲ್ಲಿ ರಾಜತನ ಪೈತೃಕ ಆಸ್ತಿಯಾಗಿರಲಿಲ್ಲ. ಅಂತೆಯೇ ಅದು ದೈವದತ್ತ ಹಕ್ಕೂ ಆಗಿರಲಿಲ್ಲ. 'ಸರ್ವವ್ಯಾಪಕ ವಿಷ್ಣುವಿನ ಅಂಶವಿಲ್ಲದೆ ರಾಜನಲ್ಲ' ಎಂಬ ನಂಬಿಕೆಯಿನ್ನೂ ಮೊಳೆತಿರಲಿಲ್ಲ. ಅದು ಪ್ರಜಾದತ್ತವಾದ, ಪ್ರಜೆಗಳಿಂದ ಕಿತ್ತೊಗೆಯಲ್ಪಡಬಹುದಾದ, ಒಂದು ಹಕ್ಕು–ತಾತ್ಕಾಲಿಕ ಹಕ್ಕು–ಮಾತ್ರವಾಗಿತ್ತು.

ಆದರೆ ಸಭೆ, ಸಮಿತಿಗಳ, 'ವಿಶ'ರ ಪ್ರೀತ್ಯಾದರಗಳಿಗೆ ಪಾತ್ರನಾದರೆ ಆತ 'ವಿಶ್ಪತಿ', 'ವಿಶಾಂಪತಿ', 'ಏಕರಾಟ್'; ಅವರು ಕೊಟ್ಟ ಅಧಿಕಾರದಿಂದ ಆತ ಉಗ್ರ; ಪ್ರತಿಯೊಬ್ಬರೂ ಆತನಿಗೆ

ಹೆದರುತ್ತಿದ್ದರು ; ಕಾಣಿಕೆಯನ್ನು ಕೊಡುತ್ತಿದ್ದರು ; ಗ್ರಾಮದ ಅಶ್ವಗಳು, ಪಶುಗಳು, ಮುಂತಾದ ಸಂಪತ್ತಿನಲ್ಲಿ ಆತನಿಗೆ ಒಂದು ಪಾಲು. ಆತ 'ಧನಪತಿ'

ಸಭೆ ಮತ್ತು ಸಮಿತಿ ಪ್ರಜಾಪತಿಯ ಈರ್ವರು ಮಕ್ಕಳು. ಅವುಗಳ ಹೆಸರು 'ನರಿಷ್ಟಾ' ಎಂದು. ಸಭೆ ಪ್ರಾಜ್ಞರ, ವಿದ್ವಜ್ಜನರ ಸಮಾಜ. ಸಮಿತಿ ಸಮಸ್ತ 'ವಿಶ' ರುಗಳ ಸಭೆ. ಪ್ರತಿಯೊಬ್ಬ ಪ್ರಜೆ (ವಿಶ್) ಗೂ ಅದರಲ್ಲಿ ಪ್ರಾತಿನಿಧ್ಯವಿತ್ತು. ದೇಶದ ರಕ್ಷಣೆಗಾಗಿ, ಅಭಿವೃದ್ಧಿಗಾಗಿ ಸಕಲ 'ವಿಶ' ರೂ ಕುಳಿತು, ಕಲೆತು ಸಮಾಲೋಚಿಸಿ ಮುಂದಿನ ಕಾರ್ಯವನ್ನು ನಿರ್ಧರಿಸಿ ಮಾರ್ಗದರ್ಶನ ಮಾಡುವರು. ಇದರ ಕಾರ್ಯ ಯುದ್ಧ ಸಮೀಪಿಸಿದಾಗಲೇ ಹೆಚ್ಚು. ರಾಜ ಚುನಾವಣೆಯೂ ಈ ಸಮಿತಿಯ ಕರ್ತವ್ಯ. ರಾಜ್ಯಭಾರವನ್ನು ಶಾಂತಿ ಕಾಲದಲ್ಲಿ ನಿರ್ವಹಿಸಲು ವಿಶಿಷ್ಟ ವ್ಯಕ್ತಿಗಳ ಗುಂಪೊಂದು—ಸಭೆಯೊಂದು— ಬೇಕಾಯ್ತು. ಇದರ ಮುಖ್ಯ ಕೆಲಸ ಆಡಳಿತ; ಸಮಿತಿಯ ನಿರ್ದೇಶಕ್ಕೆ ಹೊಂದಿಕೊಂಡು ಕೆಲಸ ಮಾಡುವುದು.

ಸಮಿತಿಯ ಮನವೊಲಿಸಿ ರಾಜನಾಗಿ ಚುನಾಯಿತನಾದ ವ್ಯಕ್ತಿ ಪಟ್ಟಾಭಿಷಿಕ್ತನಾಗುತ್ತಿದ್ದನು ; ವ್ಯಾಘ್ರಚರ್ಮದ ಮೇಲೆ ಬಂದು ನಿಲ್ಲುವನು. ಸಾಧಾರಣ ಸಂದರ್ಭಗಳಲ್ಲಿ ಗೂಳಿಯ ಚರ್ಮದಮೇಲೆ. ಆತ ವ್ಯಾಘ್ರಸಮಾನ ! ಏಕವೃಷ ! ಶಕ್ತಿ ವರ್ಧನಕ್ಕೆ, ಕ್ಷಾತ್ರ ತೇಜೋಭಿವೃದ್ಧಿಗೆ ಪರ್ಣ, ವರಣ, ಪಲಾಶ ಮುಂತಾದ ವನೌಷಧಿಗಳ ತಾಯಿತಗಳನ್ನು ಮಂತ್ರ ಪೂರ್ವಕ ವಾಗಿ ರಾಜನು ಕಟ್ಟಿಕೊಳ್ಳುತ್ತಿದ್ದನು.

ರಾಜಪುರೋಹಿತನ ಪಾತ್ರವಂತೂ ಬಹು ಮುಖ್ಯವಾದುದು. ಚಂದ್ರಗುಪ್ತನ ಮಂತ್ರಿ ಚಾಣಕ್ಯನಲ್ಲಿ, ಮಾಧವರಾವ್

ಪೇಷ್ವೆಯ ಮಂತ್ರಿ ನಾನಾಫಡ್ನವೀಸನಲ್ಲಿ, ವಿಜಯನಗರ ಸಾಮ್ರಾಜ್ಯದ ಮಂಡಲೇಶ್ವರ ನಲ್ಲೂರಿನ ಕಂಪಣ್ಣನ ಕೈ ಕೆಳಗೆ, ಆತನ ಮಗ ಇಮ್ಮಡಿ ಸಂಗಮನ ಕೈ ಕೆಳಗೆ ವಿಜಯ ನಗರದ ಬುಕ್ಕರಾಯನ ಕೈ ಕೆಳಗೆ, ಕೊನೆಗೆ ಇಮ್ಮಡಿ ಹರಿಹರನ ಕೈ ಕೆಳಗೆ ಸೈನ್ಯಾಧಿಪನಾಗಿ, ಮಂತ್ರಿಯಾಗಿ, 'ವೇದವಿದ'ರ ಅಗ್ರಣಿಯಾಗಿ ಬಾಳಿದ ಸಾಯಣನಲ್ಲಿ ಕಂಡು ಬರುವ ಗುಣಗಳು ಅಥರ್ವವೇದದ ರಾಜಪುರೋಹಿತನ ಕೆಲವಂಶಗಳೆಂದು ಭಾವಿಸಲು ಏನೂ ಅಭ್ಯಂತರವಿಲ್ಲ !

ರಾಜಪುರೋಹಿತನಿಲ್ಲದೆ ರಾಜ್ಯಚಕ್ರ ಇನಿತೂ ಉರುಳುವಂತಿರಲಿಲ್ಲ ! ರಾಜಚುನಾವಣೆಯಲ್ಲಿ, ರಾಜಪಟ್ಟಾಭಿಷೇಕದಲ್ಲಿ ಆತ ಅನಿವಾರ್ಯ. ಯುದ್ಧಕಾಲದಲ್ಲಿ ರಾಜದುಂದುಭಿಯನ್ನು, ರಣಭೇರಿಯನ್ನು ಮೊಳಗಿಸಿ ಸೈನ್ಯ ಹುರಿದುಂಬಿಸಲು ಆತ ಬೇಕು. (೪.೩೧) 'ಮಾಯಾ ಮಯೇನ ಅಂಧಕಾರೇಣ' ಅರಿರಾಯರ ಸೈನ್ಯವನ್ನು ದಿಗ್ಭ್ರಮೆಗೊಳಿಸಲು, ಹಿಮ್ಮೆಟ್ಟಿಸಲು, ಇಂದ್ರಾದಿ ದೇವತೆಗಳನ್ನು ಆಹ್ವಾನಿಸಲು ಆತನಿರಬೇಕು. (ಇಂದ್ರಃ ಸೇನಾಂ ಮೋಹಯತು. ಮರುತೋ ಘ್ನಂತ್ವೋಜಸಾ). ಆಕ್ರಮಣಕಾರಿಯ ದಾರಿಯಲ್ಲಿ ನಾನಾ ಎಡರು ತೊಡರುಗಳನ್ನು ಒಡ್ಡುವವನು ರಾಜಪುರೋಹಿತ. ಬೆರಣಿಯ ಹೊಗೆಯುಂಟುಮಾಡಿ, ಹಾವಿನ ಪೊರೆಯನ್ನು ಅದರಲ್ಲಿ ಹಾಕಿ ವಿಷಮಯವನ್ನಾಗಿ ಮಾಡುವನು; ಹೊಗೆಯ ಜಾಲವನ್ನೊಡ್ಡಿ ದಿಗ್ಭ್ರಾಂತರನ್ನಾಗಿ ಮಾಡುವನು; ಸಪತ್ನ (ವೈರಿ) ರೆಲ್ಲರೂ ಈತನ ಸ್ವಾಮಿಗೆ ಅಡಿಯಾಳುಗಳಾಗಬೇಕು; (ಸಪತ್ನಾ ಅಸ್ಮದಧರೇ ಭವಂತು) ದಾಯಾದಿ ರಾಜರುಗಳಲ್ಲಿ ಇವನೊಡೆಯನೇ ಪ್ರತಿಷ್ಠಿತನಾಗಿರಬೇಕು. (ಸಜಾತಾನಾಂ ಶ್ರೈಷ್ಠ್ಯ ಆ ಧೇಹ್ಯೇನಮ್ ೧. ೯. ೩)

ಈ ರೀತಿ ರಾಜಪುರೋಹಿತನ ಪಾತ್ರ ಕ್ಷಾತ್ರತೇಜೋಮಯ! ‘ಬ್ರಹ್ಮ’ ತೇಜೋಮಯ! ಆತನಿಲ್ಲದೆ ರಾಜನಿಗೆ ರಾಜತ್ವವಿದ್ದರೂ ಇಲ್ಲದಂತೆಯೇ.

ಕಡೆಗೆ ಸೋತೋ ಏನೋ ದೇಶಭ್ರಷ್ಟನಾದ ರಾಜನನ್ನು ಮತ್ತೆ ಹೇಗೋ ಕರೆಸಿ ಅಭಿಷಿಕ್ತನನ್ನಾಗಿ ಮಾಡಿಸಲೂ ರಾಜಪುರೋಹಿತ ಅನಿವಾರ್ಯ.

ಮುಂದೆ ಬೃಹಸ್ಪತಿ, ಶುಕ್ರ, ಕೌಟಿಲ್ಯ ಮುಂತಾದ ರಾಜನೀತಿಜ್ಞರು ವಿಸ್ತರಿಸಿದ ಅಭಿಪ್ರಾಯಗಳಿಗೆ ಅಥರ್ವವೇದ ಅಡಿಗಲ್ಲು! ಭಾರತೀಯ ರಾಜನೀತಿ ಶಾಸ್ತ್ರಕ್ಕೆ ಅಥರ್ವವೇದ ಉದ್ಗಮಸ್ಥಲ.

## ೬. ಅಥರ್ವವೇದವೂ ಕಾಮಶಾಸ್ತ್ರವೂ.

**ಸ್ತ್ರೀ ಕರ್ಮಾಣಿ :** ಅಥರ್ವವೇದದಲ್ಲಿ ಕಾಮಶಾಸ್ತ್ರಕ್ಕೆ ಸಂಬಂಧಿಸಿದ ಹಲವಾರು ಸೂಕ್ತಗಳಿವೆ. ಸುಂದರಿಯಾದ ನೆಚ್ಚಿನ ಮಗಳಿಗೆ ಅನುರೂಪನಾದ ವರ ಸಿಗಲೆಂದು ಹಾರೈಸುವುದು (೨.೩೬), ನಲ್ಲ ತನ್ನ ಮನಮೆಚ್ಚಿದ ನಲ್ಲೆಯನ್ನು ವಶೀಕರಣಮಾಡಲೆತ್ನಿಸುವುದು, ಅದಕ್ಕಾಗಿ ಮಧುವಿದ್ಯಾ ಪ್ರಯೋಗ (೧.೩೪), ಅದೇ ರೀತಿ ಪ್ರೇಯಸಿಯೋರ್ವಳು ಪ್ರೇಮಿಯೊಬ್ಬನನ್ನು ಮನಸೆಳೆದು ವಶಪಡಿಸಿಕೊಳ್ಳಲು ಹವಣಿಸುವುದು (೬.೧೨೮), ಈರ್ವರೂ ಸೇರಲು ಸಂಕೇತ ಸ್ಥಾನವೊಂದನ್ನು ಗುರುತಿಸಿಕೊಂಡು, ಬರುವ ವಿಘ್ನಗಳನ್ನು ಪರಿಹರಿಸಲು ಸಕಲರಿಗೂ ಸ್ವಾಪನಮಂತ್ರ ಪ್ರಯೋಗಮಾಡುವುದು (೪.೫), ಪುಂಸತ್ವ ಪ್ರಾಪ್ತಿಗಾಗಿ ವಾಜೀಕರಣ ಮಂತ್ರಪ್ರಯೋಗ (೪.೪), ಗರ್ಭಾದಾನ ಮಂತ್ರ (೫.೨೫),

ಗರ್ಭಸಂರಕ್ಷಣೆಗೆ, ಸುಖ ಪ್ರಸೂತಿಗೆ, ಗಂಡುಶಿಶು ಜನನಕ್ಕೆ, (೬.೧೨) ಆಲಿಂಗನ ವಿಧಿಗೆ (೬.೮; ೯.೯), ಓಡಿಹೋದ ಪತಿ ಮತ್ತೆ ಬಂದು ಮುನ್ನಿನಂತೆ ಸಾಂಸಾರಿಕ ಜೀವನದಲ್ಲಿ 'ಸಾಂಮನಸ್ಯ' ದಿಂದ ಮುಂದುವರಿಯುವುದಕ್ಕೆ (೬.೧೩೧), ಸವತಿಯರ ನಾಶನಕ್ಕೆ, ಇದಕ್ಕಾಗಿ ಕಾಮದೇವನ ಪ್ರಾರ್ಥನೆಗೆ, ಗರ್ಭದೋಷ ನಿವಾರಣೆಗೆ ಇತ್ಯಾದಿ ಅನೇಕ ಸೂಕ್ತಗಳಿವೆ. ಕಾಮಶಾಸ್ತ್ರಕ್ಕೆ ಸಂಬಂಧಿಸಿದ ಇವುಗಳನ್ನು 'ಸ್ತ್ರೀ ಕರ್ಮಾಣಿ' ಎನ್ನಬಹುದು.

**ಕಾಮದೇವ :** ಅಥರ್ವವೇದದ ಕಾಲಕ್ಕೆ ಕಾಮಶಾಸ್ತ್ರ ಚೆನ್ನಾಗಿಯೇ ಬೆಳೆದಿತ್ತು. ಕಾಮದೇವನಿಗೆ ಇಂದ್ರ, ಅಗ್ನಿ, ಮಿತ್ರ, ವರುಣ, ಪ್ರಜಾಪತಿ ಮುಂತಾದ ಪ್ರಮುಖ ದೇವತೆಗಳಿರುವಷ್ಟೇ ಪ್ರಾಮುಖ್ಯತೆಯಿತ್ತು. ಕಾಮ, ಕಾಲ, ಸ್ಕಂಭ ಇವರು ಅಥರ್ವವೇದದ ಬಹು ಪ್ರಸಿದ್ಧ ದೇವತೆಗಳೆನ್ನಲಡ್ಡಿಯಿಲ್ಲ. ಕಾಮನಿಗೆ ಏಕ, ಸತ್, ಬ್ರಹ್ಮನ್, ವಿಶ್ವಕರ್ಮನ್, ಸ್ವಯಂಭೂ ಮುಂತಾದ ವಿಶೇಷಣಗಳಿವೆ. ಕಾಮನ್ಸೆ-ಭಾವೋದ್ರಿಕ್ತ ಕಾಮನೆ-ಯೇ ಮನಸ್ಸಿನ ಮೊದಲ ಬೀಜ! ವಿಶ್ವಸೃಷ್ಟಿಗೆ ಕಾರಣವಾದ ಮೂಲಶಕ್ತಿಯಷ್ಟೇ ಶಕ್ತಿಯಿದೆ ಕಾಮನಿಗೆ. ಅಗ್ನಿಗೂ ಕಾಮನಿಗೂ ಇರುವ ಹೋಲಿಕೆ ಅದ್ಭುತವಾದುದು. ಮನ್ಮಥ ಅಗ್ನಿ ಸಮಾನನೇನು! ಪ್ರತ್ಯಕ್ಷ ಅಗ್ನಿಯೇ ಹೌದು!

**ಅಥರ್ವವೇದ-ವಾತ್ಸ್ಯಾಯನ ಕಾಮಸೂತ್ರ :** ಕೌಟುಂಬಿಕ ಜೀವನಕ್ಕೆ, ಪ್ರಜಾತಂತುವು ಕಡಿದುಹೋಗದೆ-ಅವಿಚ್ಛಿನ್ನವಾಗಿ ವರ್ಧಿಸಲು ಅಥರ್ವವೇದದ ದ್ರಷ್ಟಾರರು ಹೆಣ್ಣುಗಂಡಿಗೆ ಮಿತಕಾಮದಿಂದ ಕೂಡಿದ ಪ್ರೇಮ ಸ್ವಾಭಾವಿಕ-ಅನಿವಾರ್ಯವೆಂದು ಮನಗಂಡರು. ಆದ್ದರಿಂದ ಇಂತಹ

ಪ್ರೇಮ ಬೆಳೆಸುವುದು ಸಾಧುವಾಯಿತು. ಅಥರ್ವವೇದದ ಪುರೋಹಿತನು ಕಾಮಿಗಳ ಜೀವನದಲ್ಲಿ ಪ್ರಾದುರ್ಭವಿಸಬಹುದಾದ ನಾನಾ ಎಡರು ತೊಡರುಗಳನ್ನು ತನ್ನ ಬ್ರಹ್ಮನ್ ಶಕ್ತಿಯಿಂದ, 'ವಾಕ್' ಶಕ್ತಿಯಿಂದ, ನಾನಾ ಗಿಡ ಮೂಲಿಕೆಗಳ ಬಲದಿಂದ, ಮಂತ್ರ ತಂತ್ರಗಳಿಂದ ನಿವಾರಿಸಲು ಸಹಾಯಕನಾದನು. ಮೇಲೆ ಹೇಳಲ್ಪಟ್ಟ 'ಸ್ತ್ರೀ ಕರ್ಮಾಣಿ' ಸೂಕ್ತಗಳ ವಿಚಾರಧಾರೆಗಳೇ ಪೂರ್ಣರೂಪ ಹೊಂದಿ ವಾತ್ಸ್ಯಾಯನ ಕಾಮಸೂತ್ರದಲ್ಲಿ ಹೊರಹೊಮ್ಮಿದುವು.

ಕಾಮಸೂತ್ರದಲ್ಲಿ ಕಂಡುಬರುವ ಶಶಜಾತಿ, ವೃಷಜಾತಿ, ಅಶ್ವಜಾತಿ ಮುಂತಾದ ಪುರುಷಲಕ್ಷಣಗಳಿಗೂ, ಪದ್ಮಿನಿ, ಆಶ್ವಿನಿ, ಹಸ್ತಿನಿ, ಚಿತ್ತಿನಿ ಮುಂತಾದ ಸ್ತ್ರೀ ಲಕ್ಷಣಗಳಿಗೂ ತಳಹದಿ ಅಥರ್ವವೇದ. ಪುರುಷರ ಗುಪ್ತಾಂಗ (ಶೇಪ)ವನ್ನು ಬಲಪಡಿಸಲು ವಾಜೀಕರಣ ಮಂತ್ರಗಳನ್ನು ಪ್ರಯೋಗಿಸುತ್ತಿದ್ದುದು ಅಥರ್ವವೇದದಲ್ಲಿ ಸರ್ವೇಸಾಮಾನ್ಯವಾಗಿ ಹೋಗಿತ್ತು. (೬.೧೦೧ ಆ ವೃಷಾಯಸ್ವ ಯೇನ ಕೃಶಂ ವಾಜಯನ್ತಿ).

ಆಲಿಂಗನ ವಿಧಿಯೂ ಅಥರ್ವವೇದದಲ್ಲಿ ಬಹು ಸೊಗಸಾಗಿ ಚಿತ್ರಿಸಲ್ಪಟ್ಟಿದೆ.

ವೃಕ್ಷಂ ಯದ್ಗಾವಃ ಪರಿಷಸ್ವಜಾನಾ ಅನುಸ್ಫುರಂ
ಶರಮರ್ಚಂತ್ಯೃಭುಮ್ ||

ವನವನಸ್ಪತಿಯನ್ನು ಬಿಮ್ಮನಯೆ ಬಿಗಿದಪ್ಪಿ
'ಬಿಲ್ಲಿನಾಹಗ್ಗವದು 'ಘೂ' ಗುಟ್ಟಿ ಓಡುತಿಹ
ಬಿರುಸುಬಾಣಕೆ ತನ್ನ ಭಳಿರೆಂಬ ಜಯಘೋಷ
ಪೋಣಿಸುತ್ತಿಹುದಿನ್ನು ಮನವುಕ್ಕಿ ಒಪ್ಪಿ! ೧.೨.೩.

ವೃಕ್ಷಂ ವೃಕ್ಷಮಾ ರೋಹಸಿ ವೃಷಣ್ಯಂತೀವ ಕನ್ಯಲಾ ೫.೫.೩

ಮರಮರನ ನೀನುಮಾಲಿಂಗಿಸುತ್ತಿರುವೆ
ಕಾಮದಿಂ ನವತರುಣಿಯಾಲಿಂಗಿಪಂತೆ !
ಯಥಾ ವೃಕ್ಷಂ ಲಿಬುಜಾ ಸಮನ್ತಂ ಪರಿಷಸ್ವಜೇ ।
ಏವಾ ಪರಿ ಷ್ವಜಸ್ವ ಮಾಂ ಯಥಾ ಮಾಂ ಕಾಮಿನ್ಯಸೋ
ಯಥಾ ಮನ್ನಾಪಗಾ ಅಸಃ ॥ ೬.೮.೧.
ವೃಕ್ಷವನೆಂತು ಲತೆಯದು ಸುತ್ತಿ,
ತಬ್ಬಿಯೆ ಹಬ್ಬುತಲಿರುತಿಹುದೋ!
ಅಂತೆಯೆ ಎನ್ನಾಲಿಂಗಿಸು ಬಾ!
ಎನ್ನಲಿ ಕಾಮವ ಬೀರುತ ಬಾ!
ನಲ್ಲೆಯೆ, ನೀನೆನ್ನಗಲದೊಲು !

ಈ ರೀತಿ ಅಥರ್ವವೇದವು ಕಾಮಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವ ನಾನಾ ವಿಷಯಗಳಿಗೆ ಮೂಲಾಧಾರವಾದ ಗ್ರಂಥ. ಕಾಮಶಾಸ್ತ್ರವು ಅಥರ್ವವೇದದಲ್ಲಿ ಕಂಡುಬರುವ ಕಾಮಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯಗಳನ್ನು (ಆಥರ್ವಣಾನ್ ಯೋಗಾನ್) ಆಧಾರವಾಗಿಟ್ಟುಕೊಂಡು ಬೃಹತ್ತಾಗಿ ಬೆಳೆದಿದೆ.

## ೭. ಐತಿಹಾಸಿಕ ವಿಷಯಗಳು.

ಇತಿಹಾಸಕ್ಕೆ ಸಂಬಂಧಿಸಿದ ವಿಷಯಗಳು ಅಥರ್ವವೇದದಲ್ಲಿ ಅಷ್ಟಾಗಿ ದೊರೆಯುವುದಿಲ್ಲ. ಸಿಕ್ಕಬಹುದಾದ ಕೆಲವು ಭೌಗೋಲಿಕ ಮತ್ತು ಸಾಂಸ್ಕೃತಿಕ ವಿಷಯಗಳು ಋಗ್ವೇದಕ್ಕಿಂತ ಬಹು ಇತ್ತೀಚಿನ ಕಾಲವನ್ನು ಸೂಚಿಸುತ್ತವೆ.

ಋಗ್ವೇದದ ಆರ್ಯರು ಇನ್ನೂ ದಕ್ಷಿಣಕ್ಕೆ, ಆಗ್ನೇಯಕ್ಕೆ ಮುಂದುವರಿದಿದ್ದಾರೆ. ಶೂರರನ್ನೂ ಪರಾಕ್ರಮಿಗಳನ್ನೂ ತಮ್ಮ ಮನಮೆಚ್ಚಿದ ದೇವತೆಗಳನ್ನೂ ವೃಷಗಳಿಗೆ-ವೃಷಭಗಳಿಗೆ

ಹೋಲಿಸುತ್ತಿದ್ದ ಆರ್ಯರು ಈಗ ಸಿಂಹ, ಹುಲಿಗಳ ಪ್ರಾಂತ್ಯ ಗಳಿಗೆ ಬಂದಿದ್ದಾರೆ. ವ್ಯಾಘ್ರಚರ್ಮವನ್ನು ಮೆಟ್ಟಿ ತುಳಿದು ಪಟ್ಟಾಭಿಷಕ್ತನಾಗುವ ವಿಶ್ಪತಿ - ರಾಜ - ವ್ಯಾಘ್ರಪ್ರತೀಕ. ಗೂಳಿಯ ಚರ್ಮದ ಮೇಲೆ ಸಾಮಾನ್ಯ ಸಂದರ್ಭಗಳಲ್ಲಿ ಮಾತ್ರ ಆತ ನಿಲ್ಲುವನು. ಆದರೆ ವಿಶೇಷ ಸಂದರ್ಭಗಳಿಗೆ ವ್ಯಾಘ್ರ ಕೃತ್ತಿಕೆಯೇ ಬೇಕು.

ಮಗಧ, ಅಂಗ, ಮೂಜವಂತ, ಬಾಹ್ಲಿಕ, ಮಹಾವೃಷ, ಗಾಂಧಾರ ಈ ದೇಶಗಳು ಆರ್ಯರಿದ್ದ ನಾಡಿಗೆ ಎಲ್ಲೆಕಟ್ಟು ಗಳಾಗಿದ್ದುವು. ಇವು ಅವರಿಗೆ ಅನ್ಯಕ್ಷೇತ್ರಗಳು. (ಅನ್ಯ ಕ್ಷೇತ್ರಾಣಿ ವಾ ಇಮಾಃ ೫-೨೨).

ಆನೆ, ಸಿಂಹ, ಹುಲಿ, ಚಿರತೆ, ಕಿರುಬ, ನಾನಾ ವಿಧವಾದ ಮೃಗಗಳು, ಕಾಡುಹಂದಿಗಳು, ನಾಯಿಗಳು, ಪಶುಪಕ್ಷಿಗಳು, ಕ್ರಿಮಿಕೀಟಗಳು, ವಿಷಸರ್ಪಗಳು ತುಂಬಿದ್ದಂತಹ ಉಷ್ಣವಲ ಯದ ಕಾಡುಗಳ ಸಮೀಪದಲ್ಲಿ ಇವರು ವಾಸಿಸುತ್ತಿದ್ದರು.

ತಾವು ಬೆಳೆದುದರಲ್ಲಿ ಒಂದು ಪಾಲು ರಾಜನಿಗೆ ಸಲ್ಲುತ್ತಿತ್ತು. ವರ್ಣವ್ಯವಸ್ಥೆ ಜಾರಿಯಲ್ಲಿತ್ತು. ಆದರೂ ಸಹ ಅನಾರ್ಯ ರಾದ 'ವ್ರಾತ್ಯ' ರೆಂಬ ಜನರನ್ನು ಆರ್ಯಸಮಾಜಕ್ಕೆ ಸೇರಿಸಿಕೊಳ್ಳುತ್ತಿದ್ದರು. 'ಶೂದ್ರ' ರೆಂಬ ಮಾತಿಗೆ 'ಆರ್ಯ ರಲ್ಲದವರು' ಎಂಬ ಅರ್ಥ ಕಲ್ಪಿಸಲು ಅವಕಾಶವಿದೆ. ಬ್ರಾಹ್ಮಣ ರಿಗೆ ಭೂಸುರರೆಂಬ ಪ್ರಾಶಸ್ತ್ಯ ಚೆನ್ನಾಗಿಯೇ ಬೆಳೆದಿತ್ತು. ಬ್ರಾಹ್ಮಣರ ಹೆಂಗಸರು, ಹಸುಗಳು, ಎಲ್ಲರಿಗೂ-ರಾಜನಿಗೂ ಕೂಡ-ವಿಷಸಮಾನ. ಬ್ರಾಹ್ಮಣನಿಗೆ ಹಸುವಿನ ದಾನಮಾಡ ದವ ನರಕಕ್ಕೆ ಹೋಗಬೇಕಾಗಿತ್ತು. ಜೇನು ಮುಂತಾದ ಏಳು ಮಧುರ ವಸ್ತುಗಳಲ್ಲಿ ಬ್ರಾಹ್ಮಣನೂ ಒಬ್ಬ. ಆದರೆ ಈ ವಿಧ

ವಾದ ವಿಚಾರ ಧಾರೆಗಳೆಲ್ಲವೂ ಸಹ ಸಾಮಾನ್ಯ ಜನರ-ಪುರಾತನ ವೈದಿಕ ಮತದ ಚೌಕಟ್ಟಿನೊಳಗೆ ' ಯಜ್ಞ-ಪಂಥ' ದವರಿಗೆ ವಿರುದ್ಧವಾಗಿ ಕ್ರಾಂತಿಯೆದ್ದ ಜನರ-ವೇದವಾದ ಅಥರ್ವವೇದಕ್ಕೆ 'ಪೌರೋಹಿತ-ಪಂಥ' ದವರು ' ಲಗತ್ತಿಸಿದ' ಭಾಗಗಳೆಂದು (ಪ್ರಕ್ಷಿಪ್ತ) ಸುಖವಾಗಿ ಊಹಿಸಬಹುದು.

## ೮. ಅಥರ್ವವೇದದ ಧಾರ್ಮಿಕ ಭಾವನೆ ಮತ್ತು ತತ್ತ್ವದೃಷ್ಟಿ.

ಋಗ್ವೇದದಲ್ಲಿ ಪ್ರಕೃತಿಯ ನಾನಾ ವ್ಯಾಪಾರಗಳಿಗೆ ಹಿಂದಿರುವ ಶಕ್ತಿಗಳನ್ನು ಭಾವಿಸಿಕೊಂಡು ಅವರನ್ನು ದೇವತೆಗಳೆಂದು ಭಕ್ತಿಯಿಂದ ಸ್ತೋತ್ರಮಾಡಿದರೆ ಅಥರ್ವವೇದದಲ್ಲಿ ಹಾಗಲ್ಲ. ಅದೇ ಇಂದ್ರ, ವರುಣ, ಮಿತ್ರ, ಅಗ್ನಿ, ಪ್ರಜಾಪತಿ ಮುಂತಾದ ದೇವತೆಗಳು ಇಲ್ಲಿದ್ದರೂ ಕೂಡ ಇಲ್ಲಿ ಅವರು 'ಬ್ರಹ್ಮನ್' ಪುರೋಹಿತನ ಮಾಟಮಂತ್ರಗಳಿಗೆ ಸಹಾಯಕರಾಗಿರಬೇಕು. ವೈರಿಯ ಇಲ್ಲವೇ ವೈರಿಯ ಮಾಟಗಾರನ ಮಾಟ ನಿಷ್ಫಲವಾಗಬೇಕು. ಕೊನೆಗೆ ಸಂಪೂರ್ಣ ತಾತ್ತ್ವಿಕ ಭಾವನೆಯೇ ತುಂಬಿರುವ ವರುಣ ಸೂಕ್ತ (೪.೧೬) ಪೃಥಿವೀಸೂಕ್ತ (೧೨.೧) ಮುಂತಾದುವುಗಳೂ ಸಹ ಮಾಟಕ್ಕಾಗಿಯೇ ಇವೆ ಎನ್ನುವಂತಿದೆ. ಅಥರ್ವವೇದದ ಧಾರ್ಮಿಕಭಾವನೆ ಐಂದ್ರಜಾಲಿಕ-ಧಾರ್ಮಿಕ ಭಾವನೆ. ಇಂದ್ರಜಾಲವೂ ಅಷ್ಟೆ; ಅದು ಧಾರ್ಮಿಕ-ಇಂದ್ರಜಾಲ.

ಮೊದಲಿನ ಮೂರು ವೇದಗಳಲ್ಲಿ, ತ್ರಯೀ ವಿದ್ಯೆಯಲ್ಲಿ ಯಜ್ಞದ ಉದ್ದೇಶ ಪಾರಲೌಕಿಕ, ಪಾರಮಾರ್ಥಿಕ; ಇಂದ್ರ; ಅಗ್ನಿ, ಮಿತ್ರ, ವರುಣ, ಬೃಹಸ್ಪತಿ, ಪೂಷನ್, ಸವಿತೃ, ಸೂರ್ಯ, ಸೋಮ ಇತ್ಯಾದಿ ದೇವತೆಗಳನ್ನು ಆಹ್ವಾನಿಸಿ ಒಲಿಸಿಕೊಂಡು

ತನ್ಮೂಲಕ ಆಧ್ಯಾತ್ಮಿಕ ಪ್ರಯೋಜನ ಪಡೆಯಲು ಋಗ್ವೇದೀಯ ಆರ್ಯರು ಬಯಸಿದರೆ ಇಲ್ಲಿ ಅದೇ ದೇವತೆಗಳಿದ್ದರೂ ಅವರು ಮಾಡಿಕೊಡಬೇಕಾದ ಕೆಲಸ - ಪೋರ್ಟ್‌ಫೋಲಿಯೊ,-ಬೇರೆ. ಅದು ಐಹಿಕವಾದುದು. ಆತ್ಮರಕ್ಷಣೆ: ಅದಕ್ಕಾಗಿ ಶತ್ರುಶಾಸನ; ಇದಕ್ಕಾಗಿ ಯಜ್ಞ-ಯಾಗಗಳು, ವ್ರತವಿಶೇಷಗಳು; ಇದಕ್ಕಾಗಿ ಮಾಟ. ಹೆಚ್ಚೇನು? ಯಜ್ಞವೂ ಮಾಟದ ಒಂದು ಭಾಗ ಮಾತ್ರ. ಹಾಗೆಂತ ಪರಲೋಕವನ್ನು ಅಥರ್ವವೇದೀಯರು ಮರೆತಿಲ್ಲ. ಇಲ್ಲಿ ನೂರು ವರ್ಷ-ಸಾಧ್ಯವಿದ್ದರೆ- ನೂರಹದಿನಾರು ವರ್ಷ- ಬಾಳಬೇಕು; ಮುಪ್ಪೇರಬೇಕು; ಆ ಮೇಲೆಯೇ ಅವರಿಗೆ 'ಮೃತ್ಯು' ವೊದಗಲಿ. ಇಲ್ಲಿಯೂ ಸುಖ! ಅಲ್ಲಿಯೂ ಸುಖ! ಸಾಯಣಾಚಾರ್ಯರು ಹೇಳುವಂತೆ ಅಥರ್ವವೇದದ ದೃಷ್ಟಿ ಇಮ್ಮೊಗವಾದುದು. ಐಹಿಕದಲ್ಲೂ ಸುಖ! ಆಮುಷ್ಮಿಕಸುಖವೂ ಇರಲೇಬೇಕು ಜತೆಗೆ!

ಋಗ್ವೇದದ ದೇವತೆಗಳಲ್ಲದೆ ಇತರ ಹೊಸ ದೇವತೆಗಳು ಅಥರ್ವವೇದದ ಕಾಲದಲ್ಲಿ ಹುಟ್ಟಿಕೊಂಡಿದ್ದಾರೆ. ಕಾಲ, ಕಾಮ, ಸ್ಕಂಭ (ಆಶ್ರಯ) ಮುಂತಾದ ಹೊಸ ದೇವತೆಗಳು ಇಲ್ಲಿದ್ದಾರೆ. ಋಗ್ವೇದದ ಇಂದ್ರ, ಅಗ್ನಿ, ಮಿತ್ರ, ವರುಣ ರಷ್ಟೇ ಇವರಿಗೂ ಇಲ್ಲಿ ಪ್ರಾಶಸ್ತ್ಯ ಪ್ರಾಮುಖ್ಯತೆ ಇದೆ.

ಕಾಲ, ಕಾಮ, ಅದರಲ್ಲೂ ಸ್ಕಂಭನೆಂಬ ದೇವತೆ 'ಪರಮ ತತ್ತ್ವ'ವೆಂದು, ಪ್ರಜಾಪತಿಯೆಂದು, ಪುರುಷನೆಂದು, ಬ್ರಹ್ಮ ನೆಂದು ಭಾವಿಸಲ್ಪಟ್ಟಿದ್ದಾನೆ. ಕಾಲದೇಶಗಳು, ಸಕಲ ದೇವತೆ ಗಳು, ಪ್ರಾಣಿಗಳು ಎಲ್ಲವನ್ನೂ ಆತ ಒಳಗೊಂಡಿದ್ದಾನೆ. ಋಗ್ವೇದದ ಭಯಂಕರ ಪಶುಸಂಹಾರಕನಾದ ರುದ್ರ ಇಲ್ಲಿ ಪಶುಪತಿಯಾಗಿದ್ದಾನೆ. ಗಂಡು ದೇವತೆಗಳಿಗಿಂತ ಹೆಣ್ಣು

ದೇವತೆಗಳಾದ ಕೃತ್ಯಾ, ಯಾತು, ಗ್ರಾಹೀ, ನಿರ್ಋತಿ ಮುಂತಾದವರಿಗೆ ಪ್ರಾಶಸ್ತ್ಯ ಜಾಸ್ತಿಯಾಗಿದೆ. ಅಷ್ಟೇಕೆ ವ್ರಾತ್ಯ, ಬ್ರಹ್ಮಚಾರಿ ಮತ್ತು ಅತಿಥಿ ಇವರುಗಳಿಗಿರುವ ಪ್ರಾಮುಖ್ಯತೆ ದೇವತೆಗಳಿಗಿರುವುದನ್ನೂ ಮೀರಿಸುವಂತಿದೆ.

ಪ್ರಾಣ ಮತ್ತು ಪ್ರಾಣವಾಯುಗಳು ಇಲ್ಲಿ ಮೊಟ್ಟಮೊದಲು ಕಾಣಿಸಿಕೊಂಡಿವೆ. ಮುಂದೆ ಉಪನಿಷತ್ತುಗಳಲ್ಲಿ ಭವ್ಯರೂಪ ತಾಳಿರುವ ಆತ್ಮನ್, ಬ್ರಹ್ಮನ್, ಪ್ರಾಣ, ಸತ್, ಅಸತ್, ಹಿರಣ್ಯಗರ್ಭ, ಅಸು, ಮನಸ್, ತಪಸ್, ಬ್ರಹ್ಮಲೋಕ ಮುಂತಾದ ಶಬ್ದಗಳು ಮತ್ತು ಭಾವನೆಗಳು ಅಥರ್ವವೇದದಲ್ಲಿ ಪ್ರೋಕ್ತವಾಗಿವೆ.

ಸತ್ತವರೆಲ್ಲರೂ ಸ್ವರ್ಗಕ್ಕೆ ಹೋಗುವರೆಂಬ ಭಾವನೆಗೆ ಚ್ಯುತಿಯಿರಲಿಲ್ಲ! ಯಮ ಸ್ವರ್ಗದಲ್ಲಿದ್ದ ಅಥವಾ ಯಮಲೋಕ ನರಕವಲ್ಲ! ಆದರೆ ನರಕದ ಭಾವನೆ ಬೆಳೆದಿದೆ. ನರಕವೆಂಬ ಹೆಸರು ಮೊಟ್ಟಮೊದಲು ಅಥರ್ವವೇದದಲ್ಲಿ ಸಿಗುತ್ತದೆ! ಬ್ರಾಹ್ಮಣನಿಗೆ ಹಸು ಕೊಡದವನಿಗೆ ನರಕದ ದಾರಿ ಅನಿವಾರ್ಯ!

ಋಗ್ವೇದದ ಕಾಲದ ಜಟಿಲವಾದ, ವಿಶೇಷ ಖರ್ಚಿನ ಯಜ್ಞಯಾಗಗಳು ಜನಾದರಣೆ ಕಳೆದುಕೊಂಡಿವೆ. ಅವುಗಳಿಗೆ ಪ್ರತಿಯಾಗಿ ಆದರೆ ಅಷ್ಟೇ ಪ್ರಖರವಾದ ಫಲವೀವ ೨೨-೨೩ ಸವಗಳು ರೂಢಿಗೆ ಬಂದಿವೆ.

ಋಗ್ವೇದದ ಕೊನೆಯ ಭಾಗಗಳಲ್ಲಿ (ಹತ್ತು ಮತ್ತು ಒಂದನೆಯ ಮಂಡಲಗಳು) ಬೀಜರೂಪಿಯಾಗಿ ತೋರಿದ ತಾತ್ತ್ವಿಕ ಭಾವನೆ ಅಥರ್ವವೇದದ ಕಾಲಕ್ಕೆ ಮಹಾ ವೃಕ್ಷರೂಪಿಯಾಗಿ ಬೆಳೆದು ಬ್ರಾಹ್ಮಣಾರಣ್ಯಕಗಳಲ್ಲಿ ಹೂ ಬಿಟ್ಟು ಉಪನಿಷತ್ತುಗಳ ಕಾಲಕ್ಕೆ ಫಲವೀಯುವಂತಾಯ್ತು. ಋಗ್ವೇದದ ತಾತ್ತ್ವಿಕ

ಭಾವನೆಗೂ ಉಪನಿಷತ್ತುಗಳ (ಬ್ರಾಹ್ಮಣಾರಣ್ಯಕ ಸೇರಿ) ತಾತ್ತ್ವಿಕ ಭಾವನೆಗೂ ಸಂಬಂಧ ಕಲ್ಪಿಸುವ ಹೊಣೆ ಅಥರ್ವ ವೇದದ್ದಾಗಿದೆ. ಸರ್ವವ್ಯಾಪಕವಾದ, ಸರ್ವಶಕ್ತವಾದ ಸರ್ವಜ್ಞವಾದ ವಿಶ್ವತತ್ತ್ವವೊಂದಿದೆ ಎಂಬ ಭಾವನೆಯಂತೂ ಅಥರ್ವವೇದದ ವರುಣಸೂಕ್ತದಲ್ಲಿ (೪.೧೬) ಬಹು ಸುಂದರ ವಾಗಿ ಚಿತ್ರಿತವಾಗಿದೆ. ವೈದಿಕ ವಾಙ್ಮಯ ಪ್ರಪಂಚದಲ್ಲೇ ಸ್ವರ್ಗೀಯ ವಿಶ್ವಜ್ಞತತ್ತ್ವವನ್ನು ಇಷ್ಟು ನಿಖರವಾಗಿ ನಮ್ಮ ಮುಂದಿಡುವ ಮತ್ತೊಂದು ಸೂಕ್ತ ದೊರೆಯಲಾರದೆಂದು ಪ್ರೊಫೆಸರ್ ಫಾನ್ ರೋಥ್ ಎಂಬ ವೈದಿಕ ಪಂಡಿತರು ಒಂದು ಶತಮಾನದ ಹಿಂದೆಯೇ ಘೋಷಿಸಿದ್ದಾರೆ! ಕೆಲವು ಮಂತ್ರ ಗಳ ಸರಳಾನುವಾದವನ್ನು ನೋಡಿ :

### ಸತ್ಯಾನೃತ ಸಮೀಕ್ಷಕ-ವರುಣ ೪.೧೬

ದೇವರ್ಕಳಧಿಪತಿಯು, ಹಿರಿಯನವನು,
ಹತ್ತಿರದಲೆಂಬಂತೆ ವೀಕ್ಷಿಸುವನು!
ಕಳ್ಳಸುಳಿವೆನ್ನದೆಂದೊರ್ವ ಬಗೆಯೆ!
ಎಲ್ಲವನು ದೇವರ್ಕಳಿದನರಿವರು! ॥ ೧ ॥

ನಿಂತಿಹನ, ಚಲಿಸುವನ, ಗುಟ್ಟಿನಲಿ ನುಸುಳುವನ,
ಮರೆಯಲ್ಲಿ ಸರಿಯುವನ, ಅವಿತುಕೊಂಬುವನ,
ಈರ್ವರೊಂದೆಡೆ ಕುಳಿತು ಏನಪಿಸುಗುಡುತಿರಲಿ
ರಾಜವರುಣನು ಬಲ್ಲ ಮೂರನೆಯನಾಗಿ! ॥ ೨ ॥

ಮತ್ತುಮೀ ಬುವಿ ತಾನು, ದೂರದಾ ಮೇರೆಗಳ
ಈಯಗಲದಾಗಸವು ರಾಜವರಣನದು!

ಈ ಎರಡು ಕಡಲುಗಳು (?) ವರುಣದೇವನ ಒಡಲು!
ಮತ್ತುಮೀ ಉದಬಿಂದುವಿನಲಾತನಿಹನು! || ೩ ||

ಸ್ವರ್ಗಕಿಂತಲು ಆಚೆ ಆರೋಡಬಯಸಿದರು
ರಾಜ ವರುಣನಿಮುವಗೆ ಬಿಡುಗಡೆಯದಿಲ್ಲ!
ಅವನ ದಿವಿಚಾರರುಗಳೀಯೆಡೆಗೆ ಸಾರುವರು
ಸಾಸಿರದ ಕಂಗಳಿಂ ನೋಡಿ ಬುವಿಯೆಲ್ಲ! || ೪ ||

ದಿವಿಬುವಿಯ ಮಧ್ಯದಲಿ, ಅವಕಾಚೆ ಏನೇನು!
ಅದನೆಲ್ಲ ಕಾಣುವನು ರಾಜವರುಣನು ತಾನು!
ಜನರು ಕಣ್ಣಿವೆಯಿಡುವ ಲೆಕ್ಕವಿಟ್ಟಿಹನವನು!
'ಜೂದಿಗ'ನು ದಾಳವೆಂತಂತೆಲ್ಲ ನಿಲಿಸಿಹನು! || ೫ ||

ಓ ವರುಣ, ಆವ ನಿನ್ನೇಳೇಳು ಮುಮ್ಮಡಿಯ
ಬಹು ತೀಕ್ಷ್ಣ ಪಾಶಗಳು ಹರಡಿರ್ಪುವೋ
ಸಟೆಯನೊರೆದಾತನನು ಕಟ್ಟಲ್ಕವೆಲ್ಲವೂ!
ದಿಟವನೊರೆದಾತನ ವಿಸರ್ಜಿಸಲ್ಕೆ! || ೬ ||

ನೂರು ಹಗ್ಗದಿ ಕಟ್ಟು ವರುಣ, ಇವನನ್ನು ನೀ!
ಸುಳ್ಳನಂ ಬಿಡಬೇಡ, ಮಾನವೇಕ್ಷಕನೆ!
ಹೊಟ್ಟೆಯಿಳಿಬಿಟ್ಟು ತಾಂ ನೀಚನವ ಕುಳಿತಿರಲಿ!
ಕಟ್ಟುಗಳಚಲು ಬಿರಿವ ಪೀಪಾಯ ಹೋಲಿ! || ೭ ||

ಇಂತು ಋಗ್ವೇದದ ಬೀಜರೂಪಿ ತತ್ತ್ವದೃಷ್ಟಿಗೂ ಉಪನಿಷತ್ತುಗಳ ಫಲರೂಪಿ ತತ್ತ್ವದೃಷ್ಟಿಗೂ ಮಧ್ಯೆ ಅಥರ್ವವೇದದ ವೃಕ್ಷರೂಪಿ ತತ್ತ್ವದೃಷ್ಟಿ ಒಂದು ಸಂಬಂಧ ಕಲ್ಪಿಸುತ್ತದೆ. ತಾತ್ತ್ವಿಕ ದೃಷ್ಟಿಯಿಂದ ಅಥರ್ವವೇದವು ಋಗ್ವೇದಕ್ಕಿಂತಲೂ ಮುಖ್ಯವಾದುದೆಂದರೆ ಉತ್ಪ್ರೇಕ್ಷೆಯ ಮಾತಾಗಲಾರದು.

## ೯. ಉಪಸಂಹಾರ

ಇಲ್ಲಿಯತನಕ ವೇದವೆಂದರೇನು, ವೈದಿಕ ಸಾಹಿತ್ಯಪ್ರಪಂಚದಲ್ಲಿ ಅಥರ್ವವೇದದ ಸ್ಥಾನಮಾನವೇನು, ಅದರಿಂದ ನಮಗೆ ತಿಳಿದುಬರುವಂತಹ ಉಪಯುಕ್ತವಾದ ಅಂಶಗಳಾವುವು ಎಂಬುದನ್ನು ಈ ಕಿರುಹೊತ್ತಗೆಯ ಮಿತಿಗೊಳಪಟ್ಟು ಅತಿಸ್ಥೂಲವಾಗಿ ತಿಳಿದುಕೊಳ್ಳಲು ಪ್ರಯತ್ನಿಸಿದುದಾಯಿತು.

ಪ್ರಕೃತಿಮಾತೆಯ ಗರ್ಭದಲ್ಲಿ ಏಕಾಣು ರೂಪಿಯಾಗಿದ್ದ ಜೀವಿಯೊಂದು ಅನೇಕಾಣು ಜೀವಿಯಾಗಿ, ಮೀನಾಗಿ ಈಜಿ, ಹಕ್ಕಿಯಾಗಿ ಹಾರಿ, ಪೆಡಂಭೂತವಾಗಿ ಬದುಕಿ ಕಡೆಗೆ 'ಮನು'ವಿನ ಮಗನಾದೆನೆಂದು ಹೇಳಿಕೊಳ್ಳುವ ಮಾನವ ಬದ್ಧಿಜೀವಿಯಾಗಿ ತನ್ನ ಕ್ರತುಶಕ್ತಿಯಿಂದ ಪ್ರಕೃತಿಶಕ್ತಿಯನ್ನು ಮೀರಿ ಬಳೆದು ನಿಮಿರಿ ನಿಂತಿದ್ದಾನೆ! ಭೂಗೋಳಕ್ಕೇ ಉಪಗೋಳವನ್ನು ಸೃಷ್ಟಿಸಿ ನೇತುಹಾಕುವಷ್ಟು ಮುಂದೆ ಹೋಗಿ ಅತಿಮಾನವ ಪವಾಡಗಳನ್ನು ತನ್ನ ಮಿತಿಯಲ್ಲಿಟ್ಟುಕೊಂಡು ಸೃಷ್ಟಿಕರ್ತನ ಸರ್ಗಶಕ್ತಿಗೇ ಒಂದು ಸವಾಲು ಹಾಕುತ್ತಿದ್ದಾನೆ! ಇಂತಹ ಮಾನವನ ಜಿಹ್ವೆಯಿಂದ:—

> "ಪೃಥಿವಿಯಾ ಪ್ರಥಮ ಪ್ರಭಾತದಲಿ, ಇತಿಹಾಸ
> ದೃಷ್ಟಿಗಸ್ಪಷ್ಟ ಅಜ್ಞಾತ ಪ್ರಾಚೀನದಲಿ,
> ಚಿರಧವಲ ಹಿಮಕಿರಣ ಪೃಥುಲೋರು ಪ್ರೇಙ್ಖದಲಿ,
> ನವಜಾತ ಶಿಶುವಾಗಿ ನಲಿದ ಮಂಗಲಮಯೀ"–
>
> (ಶ್ರೀ. ಕುವೆಂಪು)

ಸಂಸ್ಕೃತಮಾತೆಯು ನುಡಿಸಿದ ದಿವ್ಯ ಸಾಹಿತ್ಯವೇ ವೇದರಾಶಿ-ಜ್ಞಾನರಾಶಿ. ಮಾನವ ಜನಾಂಗವೇ 'ಕೃತಿರಾಶಿ' ಯಿದ್ದೋ

ಎಂದು ಹೆಮ್ಮೆಯಿಂದ ಹೇಳಿಕೊಳ್ಳಬೇಕಾದ ‘ ಶಬ್ದ ಬ್ರಹ್ಮ’! ಮಹತ್ತಿನಲ್ಲೂ ಬೃಹತ್ತಿನಲ್ಲೂ ಅಸದೃಶವಾದ ಈ ವೈದಿಕ ಸಾಹಿತ್ಯ ಶಾಖೋಪಶಾಖೆಗಳಾಗಿ ಬೆಳೆದು (ಅನುಬಂಧವನ್ನು ನೋಡಿ) ತನ್ಮೂಲಕ ಪ್ರಾದುರ್ಭವಿಸಿದ ಸಾಹಿತ್ಯವಂತೂ ಅನಂತವಾಗಿದೆ; ಅಕ್ಷಯವಾಗಿದೆ.

ಇಂತಹ ದಿವ್ಯ ವೈದಿಕ ಗ್ರಂಥಗಳನ್ನು ಅರ್ಥಮಾಡಿಕೊಳ್ಳಲು ನಮಗಿರುವ ಸಾಧನಗಳು, ವೇದವನ್ನು ರಕ್ಷಿಸಿಕೊಂಡು ಬಂದಿರುವ ಬಗೆ, ಇತ್ತೀಚೆಗೆ ಸುಮಾರು ೧೫೦ ವರ್ಷಗಳಿಂದಲೂ ಪೌರ್ವಾತ್ಯ ಮತ್ತು ಪಾಶ್ಚಾತ್ಯ ಪಂಡಿತರು ವೈದಿಕ ಸಾಹಿತ್ಯದಲ್ಲಿ ನಡೆಸಿರುವ ಸಂಶೋಧನೆಗಳು, ವಿಮರ್ಶೆಗಳು ಇವೆಲ್ಲವೂ ವೈದಿಕ ಸಾಹಿತ್ಯ ಸರಸ್ವತೀಭಂಡಾರಕ್ಕೆ ಸಹೃದಯರಿತ್ತ ಕಾಣಿಕೆಯಾಗಿವೆ. ಇವೆಲ್ಲವನ್ನೂ ಸಹ, ಮೊದಲೇ ತಿಳಿಸಿದಂತೆ ವಿಸ್ತಾರ ಭಯದಿಂದ ಇಲ್ಲಿ ತಿಳಿಸಲು ಸಾಧ್ಯವಾಗಿಲ್ಲ.

ಇಷ್ಟು ಹೇಳಿ, ಅಥರ್ವವೇದದ ಋಷಿಕುಲವೇ ಹಾಡಿರುವ ಪ್ರಾರ್ಥನಾರೂಪ ಮಂಗಳದೊಡನೆ ಈ ಲಘುವಿಮರ್ಶೆಯನ್ನಿಲ್ಲಿಗೆ ಮುಕ್ತಾಯ ಮಾಡೋಣ.

ದೋಷೋ ಗಾಯ ಬೃಹದ್ಗಾಯ ದ್ಯುಮದ್ಧೇಹಿ।
ಆಥರ್ವಣ ಸ್ತುಹಿ ದೇವಂ ಸವಿತಾರಮ್ ॥ ೫.೧.೧.

ಹಾಡು ಆಥರ್ವಣಿಕ, ಪಾಡು ನೀಂ ಸಂಧ್ಯೆಯಲಿ ;
ನೀಡು ನಿನ್ನೆರ್ದೆಯಾ ಸದ್ ಬೃಹದ್ ಗಾನಮಂ!
ದ್ಯುತಿ ಸಮಾಯುಕ್ತಮಂ ಕಾಣಿಕೆಯ ನೀಡು ನೀಂ;
ನುತಿಸು ನೀಂ ದೇವನಂ ತತ್ ಸವಿತೃ ದೇವನಂ!

* * * * *

ನುತಿಸಿಹೆನು ನಾನಿಂತು ವರದೆಯನು,
ಶ್ರೀ ವೇದಮಾತೆಯನ್ನು ;
ಚೋದಿಸಲಿ 'ಪಾವಮಾನಿ' ಗಳನ್ನು ದ್ವಿಜರಿಂಗೆ,
ಪ್ರಜೆಗಳನು, ಆಯುವನು, ಪ್ರಾಣ, ಪಶು, ಕೀರ್ತಿಯನು,
ಮತ್ತುಮಾ ವಿತ್ತಮುಂ, ಬ್ರಹ್ಮವರ್ಚಸಗಳನು
ಎನಗೊಲಿದು ನೀನಿತ್ತು, ವೇದಮಾತೆ,
ಬ್ರಹ್ಮಲೋಕವನಡರು, ಹೇ ಪುನೀತೆ! ೧೯.೭೧.

ಓಂ ಶಾಂತಿಃ ಶಾಂತಿಃ ಶಾಂತಿಃ ||

## ಪರಿಶಿಷ್ಟ ೧.

## ಕೆಲವು ಮಾದರಿಯ ಮಂತ್ರಗಳು

### ೧. ಮೇಧಾಶಕ್ತಿ ಜನನಕ್ಕೆ

ಪುನರೇಹಿ ವಾಚಸ್ಪತೇ ದೇವೇನ ಮನಸಾ ಸಹ ।
ವಸ್ತೋಷ್ಪತೇ ನಿ ರಮಯ ಮಯ್ಯೇವಾಸ್ತು ಮಯಿ
ಶ್ರುತಮ್ ॥ ೧.೧.೨

### ೨. ರಾಕ್ಷಸ ನಾಶನಕ್ಕೆ

ವಿ ಲಪನ್ತು ಯಾತುಧಾನಾ ಅತ್ರಿಣೋ ಯೇ ಕಿಮೀದಿನಃ ।
ಅಥೇದಮಗ್ನೇ ನೋ ಹವಿರಿಂದ್ರಶ್ಚ ಪ್ರತಿ ಹರ್ಯತಮ್ ॥
೧.೭.೩.

### ೩. ಸುಖ ಪ್ರಸೂತಿಗೆ

ವಿ ತೇ ಭಿನದ್ಮಿ ಮೇಹನಂ ವಿ ಯೋನಿಂ ವಿ ಗವೀನಿಕೇ ।
ವಿ ಮಾತರಂ ಚ ಪುತ್ರಂ ಚ ವಿ ಕುಮಾರಂ ಜರಾಯುಣಾವ
ಜರಾಯು-ಪದ್ಯತಾಮ್ ॥ ೧.೧೧.೫.

### ೪. ಶಾಪ ಮೋಚನಕ್ಕೆ

ಯಶ್ಚ ಸಾಪತ್ನಃ ಶಪಥೋ ಜಾಮ್ಯಾಃ ಶಪಥಶ್ಚಯಃ ।
ಬ್ರಹ್ಮಾ ಯನ್ಮನ್ಯುತಃ ಶಪಾತ್ಸರ್ವಂ ತನ್ನೋ ಅಧಸ್ಪದಮ್ ॥
೨.೭.೨.

### ೫. ಪತಿ ವೇದನಕ್ಕೆ (ಕನ್ಯೆಗೆ ವರಪ್ರಾಪ್ತಿಗಾಗಿ)

ಆ ನೋ ಅಗ್ನೇ ಸಮತಿಂ ಸಂಭಲೋ ಗಮೇದಿಮಾಂ
ಕುಮಾರೀಂ ಸಹ ನೋ ಭಗೇನ ।
ಜುಷ್ಟಾ ವರೇಷು ಸಮನೇಷು ವಲ್ಗುರೋಷಂ ಪತ್ಯಾ
ಸೌಭಾಗಮಸ್ತ್ವಸ್ಯೈ ॥ ೨.೩೬.೧.

## ೬. ಸಾಂಮನಸ್ಯ (ಸುಮನಸ್ಕತೆಗೆ)

ಸಹೃದಯಂ ಸಾಂಮನಸ್ಯಮವಿದ್ವೇಷಂ ಕೃಣೋಮಿ ವಃ ।
ಅನ್ಯೋ ಅನ್ಯಮಭಿ ಹರ್ಯತ ವತ್ಸಂ ಜಾತಮಿವಾಘ್ನ್ಯಾ ॥
೩.೩೦.೧.

ಅನುವ್ರತಃ ಪಿತುಃ ಪುತ್ರೋ ಮಾತ್ರಾ ಭವತು ಸಂಮನಾಃ ।
ಜಾಯಾ ಪತ್ಯೇ ಮಧುಮತೀಂ ವಾಚಂ ವದತು
ಶಂತಿವಾಮ್ ॥ ೩.೩೦.೨.

## ೭. ಆಂಜನಕ್ಕೆ

ಯದಿ ವಾಸಿ ತ್ರೈಕಕುದಂ ಯದಿ ಯಾಮುನಮುಚ್ಯಸೇ ।
ಉಭೇ ತೇ ಭದ್ರೇ ನಾಮ್ನೀ ತಾಭ್ಯಾಂ ನಃ ಪಾಹ್ಯಾಂಜನ ॥
೪.೯.೧೦.

## ೮. ಅಮಿತ್ರಕ್ಷಯಣಂ

ಸಿಂಹಪ್ರತೀಕೋ ವಿಶೋ ಅದ್ಧಿ ಸರ್ವಾ ವ್ಯಾಘ್ರಪ್ರತೀಕೋಽವ
ಬಾಧಸ್ವ ಶತ್ರೂನ್ ।
ಏಕವೃಷ ಇಂದ್ರಸಖಾ ಜಿಗೀವಾಂ ಛತ್ರೂಯತಾಮಾ ಖಿದಾ
ಭೋಜನಾನಿ ॥ ೪.೨೨.೭.

## ೯. ಕೃಮಿನಾಶನಂ

ಯೋ ಅಕ್ಷ್ಯೌ ಪರಿಸರ್ಪತಿ ಯೋ ನಾಸೇ ಪರಿಸರ್ಪತಿ ।
ದತಾಂ ಯೋ ಮಧ್ಯಂ ಗಚ್ಛತಿ ತಂ ಕ್ರಿಮಿಂ ಜಂಭಯಾಮಸಿ ॥
೫.೨೩.೩.

## ೧೦. ಕೃತ್ಯಾ (ಮಾಟ) ಪರಿಹರಣಂ

ಯಾಂ ತೇ ಕೃತ್ಯಾಂ ಕೂಪೇಽವದಧುಃ ಶ್ಮಶಾನೇ ವಾ
ನಿಚಖ್ನುಃ ।
ಸದ್ಮನಿ ಕೃತ್ಯಾಂ ಯಾಂ ಚಕ್ರುಃ ಪುನಃ ಪ್ರತಿ ಹರಾಮಿ
ತಾಮ್ ॥ ೫.೩೧.೮.

### ೧೧. ಕಾಮಾತ್ಮಾ (ಪ್ರೇಮಿಪ್ರೇಯಸಿಗೆ)

ಯಥಾ ವೃಕ್ಷಂ ಅಬುಜಾ ಸಮನ್ತಂ ಪರಿಷಸ್ವಜೇ ।
ಏವಾ ಪರಿ ಷ್ವಜಸ್ವ ಮಾಂ ಯಥಾ ಮಾಂ ಕಾಮಿನ್ಯಸೋ
ಯಥಾ ಮನ್ನಾಪಗಾ ಅಸಃ ॥ ೬.೯.೧.
ವಾಂಛ ಮೇ ತನ್ವಂ ಪಾದೌ ವಾಂಛಾಕ್ಷ್ಯೌ ವಾಂಛ
ಸಕ್ಥ್ಯೌ ।
ಅಕ್ಷ್ಯೌ ವೃಷಣ್ಯಂತ್ಯಾಃ ಕೇಶಾಃ ಮಾಂ ತೇ ಕಾಮೇನ
ಶುಷ್ಯಂತು ॥ ೯.೯.೧.

### ೧೨. ಅಕ್ಷಿರೋಗಭೇಷಜಂ (ಕಣ್ಣುಬೇನೆಗೆ)

ತೌವಿಲಿಕೇऽವೇಲಯ ವಾಯಮೈಲವ ಐಲಯೀತ್ ।
ಬಭ್ರುಶ್ಚ ಬಭ್ರುಕರ್ಣಶ್ಚಾಪೇಹಿ ನಿರಾಲ ॥ ೭.೧೬.೩.
ಅಲಸಾಲಾಸಿ ಪೂರ್ವಾ ಸಿಲಾಂಜಾಲಾಸ್ಯುತ್ತರಾ ।
ನೀಲಾಲಗಲಸಾಲಾ ॥ ೭.೧೬.೪.

### ೧೩. ಅರಿಷ್ಟಕ್ಷಯಣಂ (ಅಪಶಕುನಕ್ಕೆ)

ದೇವಾಃ ಕಪೋತ ಇಷಿತೋ ಯದಿಚ್ಛನ್ದೂತೋ ನಿರ್ಋತ್ಯಾ
ಇದಮಾಜಗಾಮ ।
ತಸ್ಮಾ ಅರ್ಚಾಮ ಕೃಣವಾಮ ನಿಷ್ಕೃತಿಂ ಶಂ ನೋ ಅಸ್ತು
ದ್ವಿಪದೇ ಶಂ ಚತುಷ್ಪದೇ ॥ ೭.೩೭.೧.

### ೧೪. ಸರ್ಪವಿಷನಾಶನಂ

ಅಪೇಹ್ಯರಿರಸ್ಯರಿರ್ವಾ ಅಸಿ । ವಿಷೇ ವಿಷಮಪೃಕ್ಥಾ
ವಿಷಮಿದ್ವಾ ಅಪೃಕ್ಥಾಃ ।
ಅಹಿಮೇವಾಭ್ಯಪೇಹಿ ತಂ ಜಹಿ ॥ ೭.೧೯.೧.

## ೧೫. ಗರ್ಭದೋಷ ನಿವಾರಣಂ
(ಗರ್ಭವತಿಯರ ಮೈಮೇಲೆ ಬರುವ ದೆವ್ವಗಳ ನಾಶಕ್ಕೆ)

ಪಲಾಲಾನುಪಲಾಲಾ ಶರ್ಕುಂ ಕೋಕಂ ಮಲಿಮ್ಲುಚಂ
ಪಲೀಜಕಮ್ ॥
ಆಶ್ರೇಷಂ ವವ್ರಿವಾಸಸಮೃಕ್ಷಗ್ರೀವಂ ಪ್ರಮೀಲಿನಮ್॥ ೮.೬.೨.
ಮಾ ಸಂ ವೃತೋ ಮೋಪ ಸೃಪ ಊರೂ ಮಾವ
ಸೃಪೋಽನ್ತರಾ ॥
ಕೃಣೋಮ್ಯಸ್ಯೈ ಭೇಷಜಂ ಬಜಂ ದುರ್ಣಾಮಚಾತನಮ್ ॥
೮.೬.೩.

## ೧೬. ಶಾಲಾ (ಹೊಸಮನೆ ಪ್ರವೇಶಕ್ಕೆ)

ಊರ್ಜಸ್ವತೀ ಪಯಸ್ವತೀ ಪೃಥಿವ್ಯಾಂ ನಿಮಿತಾ ಮಿತಾ ॥
ವಿಶ್ವಾನ್ನಂ ಬಿಭ್ರತೀ ಶಾಲೇ ಮಾ ಹಿಂಸೀಃ ಪ್ರತಿಗೃಹ್ಣತಃ ॥
೯.೩.೧೬.

## ೧೭. ಮಧುವಿದ್ಯಾ (ವಶೀಕರಣ)

ಯಥಾ ಮಕ್ಷಾ ಇದಂ ಮಧು ನ್ಯಞ್ಜನ್ತಿ ಮಧಾವಧಿ ॥
ಏವಾ ಮೇ ಅಶ್ವಿನಾ ವರ್ಚಸ್ತೇಜೋ ಬಲಮೋಜಶ್ಚ
ಧ್ರಿಯತಾಮ್ ॥ ೯.೧.೧೭.
ಮಧುಮಾನ್ ಭವತಿ ಮಧುಮದಸ್ಯಾಹಾರ್ಯಂ ಭವತಿ ॥
ಮಧುಮತೋ ಲೋಕಾಞ್ಜಯತಿ ಯ ಏವಂ ವೇದ॥ ೯.೧.೨೩.

## ೧೮. ವಿವಾಹ ಪ್ರಕರಣಂ

ಅಮೋಽಹಮಸ್ಮಿ ಸಾತ್ವಂ ಸಾ ಮಾಹಮಸ್ಮ್ಯೃಕ್ತ್ವಂ
ದ್ಯೌರಹಂ ಪೃಥಿವೀ ತ್ವಮ್ ॥
ತಾವಿಹ ಸಂ ಭವಾಮ ಪ್ರಜಾಮಾ ಜನಯಾವಹೈ ॥
೧೪.೨.೭೧.

### ೧೯. ಅಧ್ಯಾತ್ಮ ಪ್ರಕರಣಂ (ವ್ರಾತ್ಯಕಾಂಡ)

ತದೇಕಮಭವತ್ತಲ್ಲಲಾಮಮಭವತ್
ತನ್ಮಹದಭವತ್ತಜ್ಜ್ಯೇಷ್ಠಮಭವತ್
ತದ್‌ಬ್ರಹ್ಮಾಭವತ್ತತ್ತಪೋಽಭವತ್
ತತ್ಸತ್ಯಮಭವತ್ತೇನ ಪ್ರಾಜಾಯತ ೧೫.೧.೩

### ೨೦. ಪಿತೃಮೇಧ (ಉತ್ತರಕ್ರಿಯೆಗೆ)

ಯಾಸ್ತೇ ಧಾನಾ ಅನುಕಿರಾಮಿ ತಿಲಮಿಶ್ರಾಃ ಸ್ವಧಾವತೀಃ ||
ತಾಸ್ತೇ ಸನ್ತು ವಿಭ್ವೀಃ ಪ್ರಭ್ವೀಸ್ತಾಸ್ತೇ ಯಮೋ ರಾಜಾನು
ಮನ್ಯತಾಮ್ || ೧೮.೩.೬೯

ಆ ರಭಸ್ವ ಜಾತವೇದಸ್ತೇಜಸ್ವದ್ಧರೋ ಅಸ್ತು ತೇ ||
ಶರೀರಮಸ್ಯ ಸಂ ದಹಾಥೈನಂ ಧೇಹಿ ಸುಕೃತಾಮು ಲೋಕೇ ||
೧೮.೩.೭೧.

# ಪರಿಶಿಷ್ಟ. ೨.

## * ವೈದಿಕ ಸಾಹಿತ್ಯ (ಸಿಂಹಾವಲೋಕನ)

೧. ವೇದಗಳು (ಶ್ರುತಿಗಳು)    ೨. ವೇದಾಂಗಗಳು (ಶ್ರೌತ ಗ್ರಂಥಗಳು)

### ೧. ವೇದಗಳು (ಶ್ರುತಿಗಳು)

ಅ. ಸಂಹಿತೆಗಳು    ಆ. ಬ್ರಾಹ್ಮಣಗಳು    ಇ. ಆರಣ್ಯಕ ಮತ್ತು ಉಪನಿಷತ್ತುಗಳು

- ಕ. ಋಗ್ವೇದ
  - ೧. ಶಾಕಲ ಶಾಖೆ
  - ೨. ಬಾಷ್ಕಲ ಶಾಖೆ
- ಖ. ಯಜುರ್ವೇದ
  - ಶುಕ್ಲ (ವಾಜಸನೇಯೀ)
    - ೧. ಮಾಧ್ಯಂದಿನ ಶಾಖೆ
    - ೨. ಕಾಣ್ವ ಶಾಖೆ
  - ಕೃಷ್ಣ
    - ೧. ಕಾಠಕ ಶಾಖೆ
    - ೨. ಕಪಿಷ್ಠಲಶಾಖೆ
    - ೩. ಮೈತ್ರಾಯಣೀಯ
    - ೪. ತೈತ್ತಿರೀಯ
- ಗ. ಸಾಮವೇದ
  - ೧. ರಾಣಾಯಣೀಯ ಶಾಖೆ
  - ೨. ಕೌಥುಮ ಶಾಖೆ
  - ೩. ಜೈಮಿನೀಯ ಶಾಖೆ
- ಘ. ಅಥರ್ವವೇದ
  - ೧. ಶೌನಕೀಯ ಶಾಖೆ
  - ೨. ಪೈಪ್ಪಲಾದ ಶಾಖೆ

---

* ಸಾಧ್ಯವಾದಷ್ಟು ಮುಖ್ಯವಾದ ಗ್ರಂಥಗಳನ್ನು ಮಾತ್ರ ಇಲ್ಲಿ ಸೂಚಿಸಲಾಗಿದೆ. ಸಂಹಿತೆಗಳೇ ಮುಂತಾದ ಗ್ರಂಥಗಳಿಗೆ ಬೇಕಾದಷ್ಟು ಶಾಖೆಗಳಿವೆ.

## ೨. ಬ್ರಾಹ್ಮಣಗಳು

**ಯಜುರ್ವೇದೀಯ**

೧. ಶತಪಥ ಬ್ರಾಹ್ಮಣ (ಶು. ಯ. ವೇ.)
೨. ತೈತ್ತಿರೀಯ ಬ್ರಾಹ್ಮಣ

**ಸಾಮವೇದೀಯ**

೧. ತಾಂಡ್ಯ ಮಹಾಬ್ರಾಹ್ಮಣ (ಪಂಚವಿಂಶ)
೨. ಷಡ್ವಿಂಶ ಬ್ರಾಹ್ಮಣ (ಮೇಲಿನದರ ಅನುಬಂಧ)
೩. ತಲವಕಾರ ಬ್ರಾಹ್ಮಣ (ಜೈಮಿನೀಯ)
೪. ಆರ್ಷೇಯ (ಆರ್ಷ)
೫. ಸಾಮವಿಧಾನ ಬ್ರಾಹ್ಮಣ
೬. ವಂಶ ಬ್ರಾಹ್ಮಣ
೭. ದೇವತಾಧ್ಯಾಯ

(೪-೭) ಅನುಕ್ರಮಣಿಗಳೆನ್ನಬಹುದು.

**ಅಥರ್ವಣ**



## ೩. ಆರಣ್ಯಕ ಮತ್ತು ಉಪನಿಷತ್ತುಗಳು

- ಋಗ್ವೇದೀಯ
  1. ಐತರೇಯಾರಣ್ಯಕ — ಐತರೇಯೋಪನಿಷತ್ತು
  2. ಶಾಂಖಾಯನಾರಣ್ಯಕ — ಕೌಷೀತಕೀ ಬ್ರಾಹ್ಮಣೋಪನಿಷತ್ತು
- ಯಜುರ್ವೇದೀಯ
  - ಶುಕ್ಲ
    1. ಈಶಾವಾಸ್ಯೋಪನಿಷತ್ತು
    2. ಬೃಹದಾರಣ್ಯಕೋಪನಿಷತ್ತು
  - ಕೃಷ್ಣ
    1. ಮೈತ್ರಾಯಣೀಯಾರಣ್ಯಕ — ಮೈತ್ರೀ ಉಪನಿಷತ್ತು
    2. ತೈತ್ತಿರೀಯಾರಣ್ಯಕ — ತೈತ್ತಿರೀಯೋಪನಿಷತ್ತು
    3. ಕಠೋಪನಿಷತ್ತು
- ಸಾಮವೇದೀಯ
  1. ತಲವಕಾರಾಣ್ಯಕ — ತಲವಕಾರೋಪನಿಷತ್ತು
  2. ಛಾಂದೋಗ್ಯೋಪನಿಷತ್ತು
  3. ಕೇನೋಪನಿಷತ್ತು
- ಆಥರ್ವಣ
  1. ಪ್ರಶ್ನೋಪನಿಷತ್ತು
  2. ಮುಂಡಕೋಪನಿಷತ್ತು
  3. ಮಾಂಡೂಕ್ಯೋಪನಿಷತ್ತು

ಗಮನಿಸಿ :

ಸಂಹಿತೆ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತು ಇವುಗಳು ಒಂದರಿಂದೊಂದು ಸ್ವಾಭಾವಿಕ ಹಾಗೂ ತರ್ಕಬದ್ಧವಾದ ರೀತಿಯಲ್ಲಿ ಬೆಳೆದುಬಂದಿವೆ.

ವಾಜಸನೇಯೀ ಸಂಹಿತೆಯ ಕೊನೆಯ ಭಾಗವೇ ಕಠೋಪನಿಷತ್ತು.

ಶತಪಥ ಬ್ರಾಹ್ಮಣದ ಕೊನೆಯ ಅಧ್ಯಾಯಗಳೇ ಬೃಹದಾರಣ್ಯಕ–ಉಪನಿಷತ್ತು. ಹೀಗೆಯೇ ಐತರೇಯಾರಣ್ಯಕ–ಉಪನಿಷತ್ತು. ಶಾಂಖಾಯನಾರಣ್ಯಕ—ಉಪನಿಷತ್ತು.

ಈ ರೀತಿ ಸಂಹಿತೆಯು ಉಪನಿಷತ್ತಾಗಿ, ಬ್ರಾಹ್ಮಣವು ಆರಣ್ಯಕವಾಗಿ, ಆರಣ್ಯಕವು ಉಪನಿಷತ್ತಾಗಿ ಮಾರ್ಪಟ್ಟು ಹಿಂದಿನದರ ಭಾವನೆಗಳೇ ಮುಂದಿನದರಲ್ಲಿ ಭವ್ಯರೂಪತಾಳಿ ಹೊರಹೊಮ್ಮಿರುತ್ತವೆ.

ಇಂತು ವೇದವೃಕ್ಷವು ನಾನಾ ಸಂಹಿತಾಶಾಖೋಪಶಾಖೆಗಳಾಗಿ ಬ್ರಾಹ್ಮಣ—ಆರಣ್ಯಕಗಳೆಂಬ ತಳಿರು ಹೂಗಳಾಗಿ ಉಪನಿಷದ್ರೂಪದಲ್ಲಿ ಫಲಿಸಿ ನಿಂತಿದೆ.

ಈ ವೇದವೃಕ್ಷದ ಜ್ಞಾನಫಲವನ್ನುಣ್ಣಲು ನಮಗೆ ಅತ್ಯಗತ್ಯವಾಗಿ ಬೇಕಾಗಿರುವ ಉಪ—ಕರಣಗಳೇ ವೇದಾಂಗಗಳು.

೨. ವೇದಾಂಗಗಳು (ಶ್ರೌತಗ್ರಂಥಗಳು)

- ೧. ಪ್ರಾತಿಶಾಖ್ಯಗಳು
  ಒಂದೊಂದು ಸಂಹಿತಾ ಶಾಖೆಗೂ
  ಒಂದೊಂದು ಪ್ರಾತಿಶಾಖ್ಯವಿದೆ.
- ೨. ವೇದಾಂಗಗಳು (೬)
  - ೧. ಶಿಕ್ಷಾ
    ಪಾಣಿನೀಯ ಶಿಕ್ಷಾ
    ಇತ್ಯಾದಿ
  - ೨. ಕಲ್ಪ (ಸೂತ್ರಗಳು)
    - ಋಗ್ವೇದೀಯ
      - ೧. ಆಶ್ವಲಾಯನ
      - ೨. ಶಾಂಖಾಯನ
    - ಶು. ಯ. ವೇ.
      - ಕಾತ್ಯಾಯನ
    - ಕೃ. ಯ. ವೇ.
      - ೧. ಮಾನವ
      - ೨. ಭೌಧಾಯನ
      - ೩. ಭಾರದ್ವಾಜ
      - ೪. ಆಪಸ್ತಂಬ
      - ೫. ಹಿರಣ್ಯಕೇಶಿ (ಸತ್ಯಾಷಾಢ)
    - ಸಾಮವೇದೀಯ
      - ೧. ದ್ರಾಹ್ಯಾಯನ
      - ೨. ಲಾಟ್ಯಾಯನ
      - ೩. ಮಶಕ
    - ಆಥರ್ವಣ
      - ೧. ಕೌಶಿಕ
      - ೨. ವೈತಾನ
  - ೩. ವ್ಯಾಕರಣ
    ಪಾಣಿನೀಯ ಅಷ್ಟಾಧ್ಯಾಯೀ ಇತ್ಯಾದಿ
  - ೪. ಛಂದಸ್ಸು
    ಪಿಂಗಳನ ಛಂದ ಸ್ಸೂತ್ರ
  - ೫. ಜ್ಯೋತಿಷ
    - ೧. ಋಗ್ವೇದ ವೇದಾಂಗ ಜ್ಯೋತಿಷ
    - ೨. ಯಜುರ್ವೇದ ಜ್ಯೋತಿಷ
    - ೩. ಅಥರ್ವವೇದ ಜ್ಯೋತಿಷ
  - ೬. ನಿರುಕ್ತ
    (ಯಾಸ್ಕಾಚಾರ್ಯ)

ಇದಲ್ಲದೆ ಕಲ್ಪಸೂತ್ರಗಳನ್ನು ಶ್ರೌತ, ಗೃಹ್ಯ ಮತ್ತು ಧರ್ಮ ಸೂತ್ರಗಳೆಂದು ಮತ್ತೆ ಮೂರು ವಿಧವಾಗಿ ವಿಂಗಡಿಸಬಹುದು. ಒಬ್ಬನೇ ಸೂತ್ರಕಾರ ಮೂರು ವಿಧವಾದ ಸೂತ್ರಗಳನ್ನು ಬರೆದಿರಬಹುದು.

ಅನುಕ್ರಮಣಿಗಳು, ಶ್ರಾದ್ಧಕಲ್ಪಗಳು ಇತ್ಯಾದಿ ಗ್ರಂಥಗಳೂ ಕೂಡ ವೇದಗಳ ಸಂಪೂರ್ಣ ಅರ್ಥಜ್ಞಾನಕ್ಕೆ ಸಹಕಾರಿಗಳಾಗಿವೆ. ವಿಸ್ತಾರಭಯದಿಂದ ಅವುಗಳನ್ನಿಲ್ಲಿ ಬಿಡಲಾಗಿದೆ.



WO 61—MUPM—3000—15-12-1958.

೨೬. ಸಾರಜನಕದ ಮಹತ್ವ—ಎಚ್. ಸುಬ್ಬಾಜೋಯಿಸ್

೨೭. ಭಾಸ—ಡಾ|| ಎಚ್. ಎಲ್. ಹರಿಯಪ್ಪ

೨೮. ಪಾಶ್ಚಾತ್ಯ ರಾಜಕೀಯ ತತ್ವಗಳು—ಎಂ. ಯಾಮುನಾಚಾರ್ಯ

೨೯. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ

೩೦. ರಕ್ತ—ಡಿ. ಶಾಮಣ್ಣ

೩೧. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್

೩೨. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ

೩೩. ಗಣಿತಶಾಸ್ತ್ರದ ಸ್ವರೂಪ
—ಡಾ|| ಸಿ. ಎನ್. ಶ್ರೀನಿವಾಸ ಅಯ್ಯಂಗಾರ್

೩೪. ಋಗ್ವೇದ—ಎಂ. ಎ. ಕೃಷ್ಣಸ್ವಾಮಿ

೩೫. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ

೩೬. ಆಳ್ವಾರುಗಳು—ಎಂ. ಯಾಮುನಾಚಾರ್ಯ

೩೭. ಹಿಂದು ಮುಸ್ಲಿಂ ಮೈತ್ರಿಯನ್ನು ಬೆಳೆಸಿದ ರಾಜರು
—ವಿ. ರಾಘವೇಂದ್ರರಾವ್

೩೮. ಸುಭಾಷಿತ ಸಂಗ್ರಹಗಳು—ಎಂ. ಪಿ. ಲಕ್ಷ್ಮೀನರಸಿಂಹಶಾಸ್ತ್ರೀ

೩೯. ಮಕ್ಕಳ ಭಾವಜೀವನ—ಡಾ|| ಬಿ. ಕುಪ್ಪುಸ್ವಾಮಿನಾಯಿಡು

೪೦. ಸಹಕಾರ—ಎಸ್. ಗೋಪಾಲಸ್ವಾಮಿ

೪೧. ನಯಸೇನ—ಜಿ. ವೆಂಕಟಸುಬ್ಬಯ್ಯ

೪೨. ಕೌಟಿಲ್ಯ—ಡಾ|| ಎಂ. ವಿ. ಕೃಷ್ಣರಾವ್

೪೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ

೪೪. ಮುನಿಸಿಪಾಲಿಟಿಗಳು—ಎಚ್. ಕೃಷ್ಣರಾವ್

೪೫. ಲಕ್ಷ್ಮೀಶ—ಎನ್. ಅನಂತರಂಗಾಚಾರ್

೪೬. ರುಚಿ—ಎಸ್. ವಿ. ರಂಗಣ್ಣ

೪೭. ಕೀಟಗಳು—ಡಿ. ಎಸ್. ವೀರಯ್ಯ

೪೮. ಅಲೆಗಳು—ಕೆ. ಶೇಷಾದ್ರಿ ಅಯ್ಯಂಗಾರ್

೪೯. ಮುದ್ರಣ—ಟಿ. ಎಸ್. ಶಾಮರಾವ್

೫೦. ಐವರು ಭೌತ ವೈಜ್ಞಾನಿಕರು—ಬಿ. ಎ. ಕೃಷ್ಣಸ್ವಾಮಿರಾವ್

೫೧. ಕೃತಕರೇಷ್ಮೆ—ಎಂ. ಷಡಕ್ಷರಸ್ವಾಮಿ

೫೨. ಚೀನರ ಇತಿಹಾಸ ಮತ್ತು ನಾಗರಿಕತೆ
—ಎಸ್. ವೆಂಕಟದೇಶಿಕಾಚಾರ್

೫೩. ಯುದ್ಧಕಾಲದ ಆರ್ಥಿಕ ಸಮಸ್ಯೆಗಳು
—ಎಸ್. ಲಕ್ಷ್ಮೀನರಸಿಂಹನ್
೫೪. ಆಹಾರ—ಜೆ. ಆರ್. ಲಕ್ಷ್ಮಣರಾವ್
೫೫. ಇಬ್ಸನ್ನಿನ ಕೆಲವು ನಾಟಕಗಳು—ಎಸ್. ಮಂಜುನಾಥ್
೫೬. ಶಬ್ದಪ್ರಪಂಚ—ಆರ್. ಎಲ್. ನರಸಿಂಹಯ್ಯ
೫೭. ಪ್ರಜಾಭಿಪ್ರಾಯ—ಟಿ.ಎಸ್. ರಾಜಗೋಪಾಲ ಅಯ್ಯಂಗಾರ್
೫೮. ಕಲ್ಲಿದ್ದಲು—ಕೆ. ಎಸ್. ಲಕ್ಷ್ಮಣರಾವ್
೫೯. ಜನಪದಮುಕ್ತಕಗಳು—ಎಚ್.ಎಂ. ಶಂಕರನಾರಾಯಣರಾವ್
೬೦. ಹಾಲು—ಕೆ. ಎಸ್. ಲಕ್ಷ್ಮಣರಾವ್
೬೧. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೬೨. ಭಾರತದಲ್ಲಿ ಪ್ರಜಾಪ್ರಭುತ್ವ
—ಟಿ. ಎಸ್. ರಾಜಗೋಪಾಲ ಅಯ್ಯಂಗಾರ್
೬೩. ಆರೋಗ್ಯಸಾಧನೆ—ಮೊಟಗಾನಹಳ್ಳಿ ಮಹದೇವಶಾಸ್ತ್ರೀ
೬೪-೬೫. ಆಧುನಿಕ ಭಾರತದಲ್ಲಿ ನೃತ್ಯಕಲೆ—ಯು. ಎಸ್. ಕೃಷ್ಣರಾವ್
ಮತ್ತು ಚಂದ್ರಭಾಗಾದೇವಿ
ಸಾದಾ ಪ್ರತಿ ೫೦ ನ. ಪೈಸೆ ಉತ್ತಮ ಪ್ರತಿ ೭೫ ನ. ಪೈಸೆ
೬೬. ಚುನಾವಣೆಗಳು—ಗ. ಸ. ಹಾಲಪ್ಪ
೬೭. ಮಿಾನಿನಿಂದ ಮಾನವನೆಡೆಗೆ—ಎಚ್. ಬಿ. ದೇವರಾಜಸರ್ಕಾರ್
೬೮. ಕ್ಷಯ—ಡಾ॥ ಎಸ್. ಟಿ. ಪುಟ್ಟಣ್ಣ
೬೯. ಶಿಲ್ಪಿಯ ಪಾತ್ರ—ಬಿ. ಎಲ್. ಸಿ. ರಾಜನ್
೭೦. ಪರತಂತ್ರ ಜೀವಿಗಳು ಮತ್ತು ಪರತಂತ್ರ ಜೀವನ
—ಎಚ್. ಬಿ. ದೇವರಾಜ ಸರ್ಕಾರ್
೭೧. ಮಾನವ ಹಕ್ಕುಗಳು—ಹೆಚ್. ಎಂ. ಸದಾಶಿವಯ್ಯ
೭೨. ವಿನೋದ ಗಣಿತ—ವಿ. ಕೆ. ದೊರೆಸ್ವಾಮಿ
೭೩. ಸಾಬೂನು—ಕೆ. ಎಸ್. ಲಕ್ಷ್ಮಣರಾವ್
೭೪. ಉಷ್ಣಯಂತ್ರಗಳ ಪರಿಚಯ—ಕೆ. ವಿ. ಸುಬ್ಬರಾಯ
೭೫. ಬಟ್ಟೆಗಳ ವೈಜ್ಞಾನಿಕ ಪರೀಕ್ಷೆ—ಶ್ರೀ ನಾಗಭೂಷಣ
ಸಾದಾಪ್ರತಿ ೨೫ ನ. ಪೈಸೆ; ಉತ್ತಮ ಪ್ರತಿ ೩೭ ನ. ಪೈಸೆ

---

* ಈ ಪುಸ್ತಕ ಅಚ್ಚಿನಲ್ಲಿದೆ.